# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಆರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.




ನರಸಿಂಹ ಮಂತ್ರವೊಂದಿರಲು ಸಾಕು
ದುರಿತ ಕೋಟಿಯನು ತರಿದು ಭಾಗ್ಯವನು ಕೊಡುವ ॥ ಪ ॥

ಶಿಶುವಾದ ಪ್ರಹ್ಲಾದನ ಭಾದೆ ಬಿಡಿಸಿದ ಮಂತ್ರ
ಅಸುರಕುಲದವರಿಗೆ ಶತ್ರು ಮಂತ್ರ
ವಸುಧೆಯೊಳು ಪಾತಕಿಗಳಘವ ಹೀರುವ ಮಂತ್ರ
ಪಶುಪತಿಗೆ ಪ್ರಿಯವಾದ ದಿವ್ಯಮಂತ್ರ

ದಿಟ್ಟ ಧ್ರುವರಾಯನಿಗೆ ಪಟ್ಟಗಟ್ಟಿದ ಮಂತ್ರ
ಶಿಷ್ಟ ವಿಭೀಷಣನ ಪೊರೆದ ಮಂತ್ರ
ಕಟ್ಟ ಕಡೆಯಲಿ ಅಜಾಮಿಳನ ಸಲಹಿದ ಮಂತ್ರ
ಮುಟ್ಟಿ ಭಜಿಸಿದವರಿಗೆ ಮೋಕ್ಷ ಮಂತ್ರ

ಹಿಂಡುಭೂತವ ಕಡಿದು ತುಂಡು ಮಾಡುವ ಮಂತ್ರ
ಕೊಂಡಾಡೊ ಲೋಕಕ್ಕೆ ಪ್ರಚಂಡ ಮಂತ್ರ
ಗಂಡುಗಲಿ ಕದನ ಉದ್ದಂಡ ವಿಕ್ರಮಮಂತ್ರ
ಪುಂಡರೀಕಾಕ್ಷ ಪುರಂದರ ವಿಠಲನ ಮಂತ್ರ

— ಪುರಂದರದಾಸರು




ಗೌರವ ಸಂಪಾದಕರು:

ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ:

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:

ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


---




ಸಂಪುಟ ೧೨] ಮೇ ೧೯೮೨ [ಸಂಚಿಕೆ ೧೨


# ವಿಷಯಸೂಚಿ

# ವಾರ್ತಾಲಹರಿ

## ಉತ್ಸಾಹಪೂರ್ಣ ಉಗಾದಿ ಆಸ್ಥಾನ



ಉಗಾದಿ ಆಸ್ಥಾನದಲ್ಲಿ ವೆಂಕಟೇಶ್ವರಸ್ವಾಮಿ

ದುಂದುಭಿನಾಮ ಸಂವತ್ಸರದ ಆರಂಭ ದಿನವಾದ ದಿನಾಂಕ 26–3–82 ರಂದು ತಿರುಮಲೆಯಲ್ಲಿ ವೈಭವ ಉತ್ಸಾಹಗಳಿಂದ ಉಗಾದಿ ಆಸ್ಥಾನವು ನಡೆಯಿತು. ತತ್ಸಂಬಂಧವಾಗಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ವಿವಿಧ ಶಾಖೆಗಳವರಿಂದ ಭಜನೆಕೀರ್ತನೆಗಳೂ ನಡೆದು ಈ ಬಾರಿ ಮತ್ತೊಂದು ಹೊಸ ಹೂವನ್ನು ನಿತ್ಯಕಲ್ಯಾಣ ಪಚ್ಚ ತೋರಣಗಳ ಶ್ರೀ ವೆಂಕಟೇಶ್ವರ ಸ್ವಾಮಿಯವರ ಪಾದಗಳಲ್ಲಿ ಅರ್ಪಿಸಲಾಯಿತೆಂದರೆ ಅತಿಶಯೋಕ್ತಿ ಆಗಲಾರದು.

ದಿನಾಂಕ 25 ರ ಸಂಜೆ ತಿರುಪತಿಯ ಓರಿಯಂಟಲ್ ಕಲಾಶಾಲೆಯಲ್ಲಿ ಆಂಧ್ರಪ್ರದೇಶದ ವಿವಿಧ ಭಾಗಗಳಿಂದ ಭಜನ ಕೀರ್ತನ ಮಂಡಳಿಗಳೂ, ಶಾಲಾ ಬಾಲಕ ಬಾಲಕಿಯರೂ ಆಸ್ತಿಕ ಭಕ್ತ ಸಮೂಹವೂ ನೆರೆದು ಸಮೂಹ ಗಾನ ಭಜನೆಗಳಲ್ಲಿ ತೊಡಗಿ 26 ರ ಮುಂಜಾವಿನ ಬ್ರಾಹ್ಮೀ ಮುಹೂರ್ತದಲ್ಲಿ ತಿರುಮಲೆಗೆ ಪಾದಯಾತ್ರೆ ಹೊರಟರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್ ದಂಪತಿಗಳು ಈ ಪಾದಯಾತ್ರಾ ಕಾರ್ಯದಲ್ಲಿ ಮುಂದಾಳುಗಳಾಗಿದ್ದು, ಯಾತ್ರಿಕ ಭಜಕರಿಗೆ ದಾರಿಯಲ್ಲಿ ನೀರು ನೆರಳು ವಿಪುಲವಾಗಿ ದೊರೆಯುವಂತೆ ಏರ್ಪಾಡುಮಾಡಿ ಅವರೊಂದಿಗೇ ಬೆಟ್ಟವನ್ನು ಏರಿದರು.

ತಿರುಮಲೆಯಲ್ಲಿ ಭಜನ ಕೀರ್ತನ ಸ್ಪರ್ಧೆಗಳನ್ನು ಏರ್ಪಡಿಸಲಾಗಿದ್ದು, ಉಗಾದಿಯ ಸಂಜೆ ಬಹುಮಾನಗಳನ್ನೂ ನೀಡಲಾಯಿತು. ಉಗಾದಿಯ ಈ ಪಾದಯಾತ್ರಾ ಕಾರ್ಯಕ್ರಮದಲ್ಲಿ ಭಾಗವಹಿಸಿದ ಭಕ್ತರಿಗೆ ಊಟವಸತಿಗಳನ್ನು ಉಚಿತವಾಗಿ ತಿ. ತಿ. ದೇ. ಏರ್ಪಡಿಸಿದ್ದಿತು.

## ವರಂಗಲ್‌ನ ತಿ. ತಿ. ದೇ. ಕೇಂದ್ರದಲ್ಲಿ ಹೊಸ ಕಟ್ಟಡ ಉದ್ಘಾಟನೆ

ವರಂಗಲ್ ನ ತಿ. ತಿ. ದೇ ವಿಚಾರಣಾ ಕೇಂದ್ರದಲ್ಲಿ ಕಲ್ಯಾಣ ಮಂಟಪವೂ ಇರುವುದಾದರೂ ಪ್ರತ್ಯೇಕವಾದ ಊಟದ ವಿಭಾಗವು ಇದುವರೆಗೆ ಇಲ್ಲದಿದ್ದು, ಇಲ್ಲಿ ನಡೆಯುವ ವಿವಾಹೋಪನಯನರ್ಥಾದಿ ಶುಭ ಕಾರ್ಯಗಳಿಗೆ ಅನುಕೂಲವಾಗುವಂತೆ ಪ್ರತ್ಯೇಕವಾದ ವಿಶಾಲವಾದ ಊಟೋಪಚಾರ ಕೊಠಡಿಯ ನಿರ್ಮಾಣಕ್ಕೆ ಶಂಕು ಸ್ಥಾಪನೆ ಇತ್ತೀಚೆಗೆ ನಡೆಯಿತು. ಭಾರತದ ವಿದೇಶ ವ್ಯವಹಾರ ಖಾತೆಯ ಮಂತ್ರಿ ಶ್ರೀ ಪಿ. ವಿ. ನರಸಿಂಹರಾಯರು ಸದರಿ ಕಟ್ಟಡಕ್ಕೆ ಕಳೆದ ಮಾರ್ಚ್ 14 ರಂದು ಶಂಕು ಸ್ಥಾಪನೆ ಮಾಡಿದರು. ಆಂಧ್ರದ ಸಂಸ್ಕೃತಿ ಇಲಾಖಾ ಮಂತ್ರಿ ಶ್ರೀ ಹಯಗ್ರೀವಾಚಾರಿ, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಮತ್ತಿತರರು ಹಾಜರಿದ್ದ ಈ ಶಂಕು ಸ್ಥಾಪನಾ ಸಭೆಯಲ್ಲಿ ಸ್ಥಳೀಯ ಗಣ್ಯರನೇಕರು ಭಾಗವಹಿಸಿದ್ದರು.



## ಸುರಂಗ ಮಾರ್ಗ ಉದ್ಘಾಟನೆ

ಅಲಿಪಿರಿಯಲ್ಲಿ ಬೆಟ್ಟಕ್ಕೆ ಹತ್ತುವ ಕಾಲುಹಾದಿ ಹಾಗೂ ವಾಹನಗಳ ಉಕ್ಕಡದಲ್ಲಿನ ಸಂದಣಿಯನ್ನು ತಪ್ಪಿಸಲು ರೂಯಾ ಆಸ್ಪತ್ರೆಯ ಕಡೆಯಿಂದ ವಾಹನದ ರಸ್ತೆಯ ಕೆಳಗೆ ಪಾದಚಾರಿಗಳಿಗಾಗಿ ಸುರಂಗ ಮಾರ್ಗವನ್ನು ನಿರ್ಮಿಸಲಾಗಿದ್ದು ಈಚೆಗೆ ಅದನ್ನು ಸಾರ್ವಜನಿಕ ಉಪಯೋಗಕ್ಕಾಗಿ ತಿ. ತಿ. ದೇ. ಕಾರ್ಯವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಅವರು ಉದ್ಘಾಟಿಸಿದರು. ಚಿತ್ರದಲ್ಲಿ ಉಗಾದಿ ಆಸ್ಥಾನಕ್ಕೆ ಸ್ವಾಮಿಸೇವೆಯಲ್ಲಿನ ಪೂಜಾ ದ್ರವ್ಯಗಳನ್ನು ಹೊತ್ತು ಬರುತ್ತಿರುವುದನ್ನು ಕಾಣಬಹುದು.



ವರಂಗಲ್‌ನ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ಡೈನಿಂಗ್ ಹಾಲ್ ಶಂಕುಸ್ಥಾಪನೆ.



ಅನ್ನಮಾಚಾರ್ಯ ವರ್ಧಂತಿ ಉದ್ಘಾಟನಾ ಸಮಾರಂಭ. ಎಡದಿಂದ ಸರ್ವಶ್ರೀ ಗೌರಿಪೆದ್ದಿ ರಾಮಶರ್ಮ, ರಜನೀಕಾಂತರಾವ್, ಪಿ. ವೆಂಕಟೇಶ್ವರರಾವ್, ಸುಬ್ಬರಾಯುಲು, ಡಿ. ಪಶುಪತಿ, ಶ್ರೀನಿವಾಸುಲುಶೆಟ್ಟಿ

# ಅನ್ನಮಾಚಾರ್ಯ ವರ್ಧಂತಿ ಉತ್ಸವಗಳು

ತಿರುಮಲೆಯ ಶ್ರೀ ವೆಂಕಟೇಶ್ವರನ ಅಂತರಂಗಿಕ ಭಕ್ತ ವಾಗ್ಗೇಯಕಾರ ಅನ್ನಮಾಚಾರ್ಯರ 479 ನೆಯ ವರ್ಧಂತಿ ಉತ್ಸವಗಳು ದಿನಾಂಕ 21-3-82 ರಿಂದ ದಿನಾಂಕ 28-3-82 ರ ವರೆಗೆ ಒಂದು ವಾರಕಾಲ ಸಡಗರದಿಂದ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದವು.

21-3-82 ರಂದು ಪ್ರಾತಃಕಾಲ ಅನ್ನಮಾಚಾರ್ಯರ ತೈಲಚಿತ್ರ ಮೆರವಣಿಗೆಯೊಂದಿಗೆ ಆರಂಭವಾದ ಉತ್ಸವಗಳು ತಿ. ತಿ. ದೇ. ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಸುಬ್ಬರಾಯುಲು ಅವರ ಅಧ್ಯಕ್ಷತೆಯಲ್ಲಿ ಆಂಧ್ರಪ್ರಭ ವಾರಪತ್ರಿಕೆಯ ಸಂಪಾದಕ ಶ್ರೀ ಪಿ. ವೆಂಕಟೇಶ್ವರರಾವ್ ಅವರಿಂದ ಉದ್ಘಾಟಿತವಾಯಿತು. ಉದ್ಘಾಟನೆಯಲ್ಲಿ ಮಾತನಾಡುತ್ತ ಶ್ರೀಯುತರು ಇದಕ್ಕೆ ತುಸು ಮೊದಲು ನಡೆದ ಪೋತನ ಪಂಚಶತಿ ಉತ್ಸವಗಳನ್ನು ನೆನಪಿಸಿ ಕೊಂಡು ಪೋತನ ಅನ್ನಮಾಚಾರ್ಯರು ಸಮಕಾಲೀನರಾಗಿದ್ದು ಅನ್ನಮಾಚಾರ್ಯರು ಪೋತನ ಭಾಗವತದ ಪರಿಚಯ ಹೊಂದಿದ್ದಿರಬೇಕೆಂದೂ, ಆದರೂ ಪೋತನ ಕಾವ್ಯದಂತೆ ಪ್ರಸಿದ್ಧಿ ಹೊಂದದ ಅನ್ನಮಾಚಾರ್ಯರ ಕೀರ್ತನೆಗಳು ಈಗೀಗಲೇ ಪ್ರಚಾರಕ್ಕೆ ಬರುತ್ತಿರುವುದು ಸಂತಸದ ಸಂಗತಿಯೆಂದೂ ಆಂಧ್ರಪ್ರಭ ವಾರಪತ್ರಿಕೆಯೂ ತಿ.ತಿ.ದೇ. ಗಳಂತೆಯೇ ಅನ್ನಮಾಚಾರ್ಯ ಕೀರ್ತನೆಗಳ ಪ್ರಸಾರ ಕಾರ್ಯದಲ್ಲಿ ಶ್ರಮಿಸುವುದೆಂದೂ ತಿಳಿಸಿದರು.

ಅಧ್ಯಕ್ಷ ಪೀಠದಿಂದ ಮಾತನಾಡಿದ ಶ್ರೀ ಸುಬ್ಬರಾಯುಲು ಅವರು ಅನ್ನಮಾಚಾರ್ಯ ಕೀರ್ತನೆಗಳ ಪ್ರಸಾರ ಕಾರ್ಯದಲ್ಲಿ ತಿ. ತಿ. ದೇ. ಗಳ ವಿವಿಧ ಯೋಜನೆಗಳನ್ನೂ ಅವುಗಳ ಕಾರ್ಯಗತಿಯಲ್ಲಿನ ಹಲವಾರು ಹಂತಗಳನ್ನೂ ವಿವರಿಸಿದರು.

ಅನ್ನಮಾಚಾರ್ಯ ವಾಙ್ಮಯ ಸಂಸ್ಕರಣದ ಬಗೆ ಶ್ರೀ ಗೌರಿಪೆದ್ದಿ ರಾಮಸುಬ್ಬ ಶರ್ಮರೂ, ಅನ್ನಮಾಚಾರ್ಯ ಕೀರ್ತನ ಪ್ರಚಾರದ ಬಗ್ಗೆ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲುಶೆಟ್ಟಿ ಅವರು ವರದಿಗಳನ್ನು ಓದಿದರು.

ಆರುದಿನಗಳ ಕಾಲ ಅಖಂಡ ಸಂಗೀತೋತ್ಸವದಂತೆ ಕರ್ಣಾನಂದಕರವಾಗಿ ನಡೆದು ದಿನದಿನಕ್ಕೂ ಹೆಚ್ಚು ಹೆಚ್ಚಿನ ಜನವನ್ನು ಆಕರ್ಷಿಸುತ್ತ ನಡೆದ ಈ ವರ್ಧಂತಿ ಉತ್ಸವಗಳಲ್ಲಿ ಸರ್ವಶ್ರೀ ಟಿ. ಎನ್. ಕೃಷ್ಣನ್, ಯೆಲ್ಲಾ ವೆಂಕಟೇಶ್ವರರಾವ್ ಬಾಲಕೃಷ್ಣ ಪ್ರಸಾದ್, ಶ್ರೀಮತಿ ಮಣಿಕೃಷ್ಣಸ್ವಾಮಿ, ಮಂಚಾಲ ಜಗನ್ನಾಥರಾವ್ ಇನ್ನೂ ಮೊದಲಾದ ಅನೇಕ ಹಿರಿಯ ಕಿರಿಯ ಕಲಾವಿದರು ಸಂಗೀತಜ್ಞರು ಭಾಗವಹಿಸಿ ಅನ್ನಮಾಚಾರ್ಯ ಕೃತಿ ಸಮಾರಾಧನೆ ಮಾಡಿದರು.

ಸಂಗೀತ ಗೋಷ್ಠಿಗಳೇ ಅಲ್ಲದೆ ನೃತ್ಯ ಕಾರ್ಯಕ್ರಮಗಳೂ ನಡೆದು ಅನ್ನಮಾಚಾರ್ಯರ ಕೀರ್ತನೆಗಳಿಗೆ ರೂಪ ಕಲ್ಪನೆಯನ್ನೂ ನೀಡಿದ್ದು ಮತ್ತೊಂದು ವಿಶೇಷವೆನ್ನಬಹುದು. ಖ್ಯಾತ ನೃತ್ಯಗಾರರಾದ ಶ್ರೀ ನರಸಿಂಹರಾವ್ ದಂಪತಿಗಳು, ಕುಮಾರಿ ಸಬಿತ ಮೊದಲಾದವರು ಪದಕವಿತಾ ಪಿತಾಮಹನ ಮಾತಿನ ಹಲವು ಹೊರಳುಗಳನ್ನು ಅಭಿನಯದ ಮೂಲಕ ಸ್ಪಷ್ಟಗೊಳಿಸಿದರು.

28-3-82 ರಂದು ಸಮಾರೋಪ ಸಮಾರಂಭ ನಡೆದು ಅಂದು ತಿ. ತಿ. ದೇ. ಆಸ್ಥಾನ ವಿದುಷಿ ಕುಮಾರಿ ಶ್ರೀರಂಗಂ ಗೋಪಾಲರತ್ನಂ ಅವರು ಮುಖ್ಯ ಗಾಯಕಿಯಾಗಿದ್ದರು. ಅಂದು ಮಾತನಾಡಿದ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಪ್ರಸಾದರು ಅನ್ನಮಾಚಾರ್ಯರ ಕೀರ್ತನೆಗಳ ಪ್ರಚಾರದಲ್ಲಿ ಎಲ್ಲ ತಿ. ತಿ. ದೇ. ಆಸ್ಥಾನ ವಿದ್ವಾಂಸರನ್ನೂ ತೊಡಗಿಸುವ ಹಾಗೂ ವಿದ್ವತ್ತಿನ ಭಾರವನ್ನು ಕೀರ್ತನೆಗಳ ಮೇಲೆ ಹೊಂಸದೆ ಶ್ರೀ ಸಾಮಾನ್ಯನಿಗೆ ತಕ್ಕಂತೆ ಅವುಗಳ ಹಾಡುವಿಕೆಯನ್ನು ಹರಡುವ ಯೋಜನೆಗಳಿವೆಯೆಂದೂ ತಿಳಿಸಿದರು.

( 39 ನೇ ಪುಟವನ್ನೂ ಗಮನಿಸಿ )



ಅನ್ನಮಾಚಾರ್ಯ ಕೃತಿಗಳಿಗೆ ತಮ್ಮ ನೃತ್ಯದ ರೂಪ ನೀಡುತ್ತಿರುವ ಶ್ರೀ ನರಸಿಂಹರಾವ್ ದಂಪತಿಗಳು

# ಅಹೋಬಿಲ ನರಸಿಂಹ

"ಶ್ರೀಮತ್ ಪಯೋನಿಧಿ ನಿಕೇತನ
ಚಕ್ರಪಾಣಿ
ಭೋಗೀಂದ್ರ ಭೋಗಮಣಿ ಪೂಜಿತ
ರಾಜಪೀಠ
ಯೋಗೀಶ, ಶಾಶ್ವತ ಶರಣ್ಯ
ಭವಾಬ್ಧಿ ಪೋತ
ಲಕ್ಷ್ಮೀನೃಸಿಂಹ ಮಮದೇಹಿ
ಕರಾವಲಂಬಂ ||

ಅಹೋಬಿಲವು ಕಡಪ ಜಿಲ್ಲೆಗೆ ಸೇರಿದ ಮಹಾಪುಣ್ಯಕ್ಷೇತ್ರ. ಇದು ಕರ್ನೂಲಿನಿಂದ ಎಂಬತ್ತು ಮೈಲಿಗಳ ದೂರದಲ್ಲಿದೆ. "ಅಹೋಬಿಲ"ವೆಂದರೆ, ನಿರಂತರವೂ ಭಕ್ತವೃಂದವನ್ನು ರಕ್ಷಿಸಿ ಸಲಹುವ ಶಾರ್ದೂಲ ಅವತಾರ ಪುರುಷನ ಬಿಲವೆಂದರ್ಥ.

ಇಲ್ಲಿ ಪರಮಾತ್ಮನು ಶಿಷ್ಟರಕ್ಷಣ ಮಾಡಲು ಸಿದ್ಧವಾಗಿ ನಿಂತಿರುವುದೇ ಒಂದು ವೈಶಿಷ್ಟ್ಯವಾಗಿದೆ. ವಿಶ್ವಾಕಾರನಾದ ಭಗವಂತನು ಭಕ್ತಪರಾಧೀನನಲ್ಲವೆ? ಆ ಬಿರುದನ್ನು ರಕ್ಷಿಸಿಕೊಳ್ಳಲು ಮಾಡಿದ ಅವತಾರ 'ನರಸಿಂಹಾವತಾರ'. ಕಾರಣ. ಈ ಅವತಾರ ಬೇರೆ ಯಾವ ಕಾರಣಕ್ಕೂ ಆಗದೆ ಕೇವಲ ಒಂದು ಭಕ್ತ ಹಸುಳೆಗಾಗಿ ಮಾಡಿದ ಅವತಾರವಷ್ಟೆ. ಈ ಭಯಂಕರ ಅವತಾರವನ್ನು ಕಾಣಲು ಭಕ್ತಕೋಟಿಯು ಅಂಜುವುದೆಂದರಿತು ಲಕ್ಷ್ಮೀನರಸಿಂಹನಾಗಿ, ಶಾಂತಮೂರ್ತಿಯಾಗಿ ದರ್ಶನ ನೀಡುತ್ತಿದ್ದಾನೆ. ಅದೂ ಒಂದು ವೈಶಿಷ್ಟ್ಯ. ದುರುಳ ಹಿರಣ್ಯಕನನ್ನು ಸಂಹರಿಸಿ "ಪ್ರಹ್ಲಾದವರದ"ನೆಂಬ ನಾಮವನ್ನು ಪಡೆದು, ಗಿರಿಯ ಮೇಲೆ ನಿಂತು, ಭಕ್ತ ವರ್ಗಕ್ಕೆ ಅಭಯವನ್ನು ನೀಡಲು ಕಾದು ಕುಳಿತಿದ್ದಾನೆ. ಅವನ ದರ್ಶನ ಪಡೆಯಲು ಭಕ್ತಜನ ಪ್ರತಿದಿನವೂ ಅಲ್ಲಿಗೆ ತೆರಳಿ ಅವನ ದರ್ಶನವನ್ನು ಪಡೆಯುತ್ತಿರುವರು.

ಭಕ್ತಾದಿಗಳು ಮೊದಲು ಬೆಟ್ಟಕ್ಕೆ ಹತ್ತು ಕಿಲೋಮೀಟರ್ ಇರುವ ಕೆಳಗಿನ ಆಲಯಕ್ಕೆ ಹೋಗಿ ಅಲ್ಲಿ ಲಕ್ಷ್ಮಿಯೊಡನೆ ಬೆಳಗುತ್ತಿರುವ ನರಸಿಂಹನ ದರ್ಶನವನ್ನು ಪಡೆಯಬೇಕು. ಅಲ್ಲಿಗೆ ಹೋಗುವ ಮಾರ್ಗವನ್ನು ಹೀಗಿದೆ.

ಕರ್ನೂಲಿನಿಂದ ಹೊರಟರೆ, ಅನತಿದೂರದವರೆಗೂ ರಸ್ತೆಯು ಜನಸಂಚಾರದಿಂದ ಕೂಡಿರುತ್ತೆ. ಮುಂದೆ, ಮುಂದೆ ಸಾಗಲು ಎರಡು ಕಡೆಗಳಲ್ಲೂ ಕಾಡುಮಾರ್ಗ. ನಿರ್ಜನ ಪ್ರದೇಶ. ಹಿಂದಿನ ಕಾಲದಲ್ಲಿ ಇನ್ನೂ ಕಠಿಣಮಾರ್ಗವಿತ್ತಂತೆ. ಈಗ ಅನುಕೂಲ ಮಾಡಿದ್ದಾರೆ. ನೋಡಲು ರಮ್ಯಪ್ರದೇಶ. ಸಿಂಹವು ವಾಸಿಸುವುದು ಅರಣ್ಯದಲ್ಲವೇ? ಆದಕಾರಣ ನಮ್ಮ ದೈವವಾದ ನರಹರಿಯು ಅಲ್ಲಿ ವಾಸಿಸಲು ಪ್ರೀತನಾಗಿದ್ದಾನೆ. ಅಹೋಬಿಲವನ್ನು ಸಮೀಪಿಸಿದ ಕೂಡಲೆ ಒಂದು ಮಂಟಪ, ತದನಂತರ ರಾಜಗೋಪುರ, ಇದನ್ನು ಸಮೀಪಿಸಿದರೆ ಮೋದಕ ಪ್ರಿಯನಾದ ಮತ್ತು ಸಕಲ ವಿದ್ಯೆಗಳಿಗೂ ಅಧಿಪತಿಯಾದ ವಿಘ್ನೇಶ್ವರನು ಭಕ್ತಕೋಟಿಗೆ ಸ್ವಾಗತವೀಯಲು ಸಿದ್ಧನಾಗಿ ಕುಳಿತಿದ್ದಾನೆ. ಯಾತ್ರಿಕರು ಅವನ ಸ್ವಾಗತವನ್ನು ಸ್ವೀಕರಿಸಿ ಮುಂದಿನ ಪ್ರಾಕಾರಕ್ಕೆ ಹೋದರೆ ಅರ್ಚಕರಿಗೆ ಮತ್ತು ಅಲ್ಲಿ ಸೇರಿದ ಸಿಬ್ಬಂದಿಗಳಿಗೆಲ್ಲಾ ಗೃಹನಿರ್ಮಾಣ ಮಾಡಿಕೊಟ್ಟಿದ್ದಾರೆ. ಸ್ವಾಮಿಗಳು ಅಲ್ಲಿಗೆ ದಯಮಾಡಿಸಿದಾಗ ವಾಸಿಸಲು ದೊಡ್ಡ ಅಹೋಬಿಲ ಮಠವಿದೆ. ವೇದ ಪಾಠಶಾಲೆ ಇದೆ. ಅಲ್ಲಿಂದ ಮುಂದೆ ಹೋದರೆ ನೂರಾರು ಸ್ತಂಭಗಳಿಂದ ಕೂಡಿದ ದೇವಾಲಯವನ್ನು ಕಾಣಬಹುದು. ಅಲ್ಲಿನ ಒಂದು ವೈಶಿಷ್ಟ್ಯವೇನೆಂದರೆ ಪ್ರತಿ ಸ್ತಂಭದಲ್ಲೂ ನರಹರಿಯ ಮೂರ್ತಿಯನ್ನು ಕಾಣಬಹುದು. ಜನಜನಿತವಾದ ಕಥೆಯಂತೆ ದುರುಳ ರಕ್ಕಸನು ಯಾವ ಕ್ಷಣದಲ್ಲಿ ತನ್ನ ಭಕ್ತನಾದ ಕಂದ ಪ್ರಹ್ಲಾದನನ್ನು ವಿಪತ್ತಿಗೆ ಈಡು ಮಾಡುವನೋ ಎಂಬ ಕಾರಣದಿಂದ ಅವನನ್ನು ರಕ್ಷಿಸಲು ಅಣು ಅಣುವಿನಲ್ಲು ಭಗವಂತನು, ಕಾದು ನಿಂತಿಹನು. ಒಂದೊಂದು ಸ್ತಂಭದಲ್ಲೂ ಶಿಲ್ಪಿಯು ತನ್ನ ಚಾಕಚಕ್ಯತೆಯನ್ನು ತೋರ್ಪಡಿಸಲು ನಾನಾ ವಿಧವಾದ ವಾದ್ಯಗಳನ್ನು ನಿರ್ಮಿಸಿದ್ದಾನೆ. ಇದೆಲ್ಲವೂ ಹಿಂದಿನ ಶಿಲ್ಪಿಗಳ ಚಾತುರ್ಯ.

ಇನ್ನು ದೇವಾಲಯದ ಒಳಗೆ ನಡೆದರೆ ಕಾಣಬೇಕಾದ ಭಗವದಂಶವು ಬಹಳವಿರುವುದು. ಉಗ್ರರೂಪಿಯಾದ ನರಸಿಂಹನು ಶಾಂತರೂಪಿಯಾಗಿ ಎಡತೊಡೆಯಮೇಲೆ ಲಕ್ಷ್ಮೀಸಹಿತನಾಗಿ ದರ್ಶನ ನೀಡುತ್ತಿದ್ದಾನೆ. ಅದನ್ನು ಕಾಣಲು ಸಾವಿರ ನಯನಗಳಿದ್ದರೂ ಸಾಲದು.

ಮುಂದೆ ಉತ್ಸವಮೂರ್ತಿ, ಜ್ವಾಲಾ ನರಸಿಂಹ, ಚೆಂಚುಲಕ್ಷ್ಮಿ, ಪ್ರಹ್ಲಾದವರದ, ಇವೆಲ್ಲವೂ ಆಲಯದಲ್ಲಿ ಶೋಭಾಯಮಾನವಾಗಿ ಒಂದುಗೂಡಿ ಭಕ್ತಿಯನ್ನು ಉಕ್ಕಿಸುವುದು. ಅಲ್ಲಿಂದ ಇಳಿದು ಬಂದರೆ ಪಕ್ಕದಲ್ಲಿ ಅಮ್ಮನವರ ಆಲಯ. ಅಮೃತವಲ್ಲಿ ತಾಯಾರು ಕರುಣಾಮೂರ್ತಿಯಾಗಿ ಭಕ್ತರಿಗೆ ಅಭಯವನ್ನು ನೀಡುತ್ತಾ ನಿಂತಿದ್ದಾಳೆ. ಅವಳ ದರ್ಶನ ಪಡೆದು ಮುಂದಕ್ಕೆ ಬೆಟ್ಟದಮೇಲೆ ನಿಂತಿರುವ ದೇವರದರ್ಶನಕ್ಕೆ ಹೊರಡಬೇಕು. ಅಹೋಬಿಲದಲ್ಲಿ ದೇವರಿಗೆ ಪಾನಕ ನೈವೇದ್ಯ



ನಾಮಕ್ಕಳ್‌ನ ನರಸಿಂಹ

**ಶ್ರೀಮತಿ ಶಾರದಾಮೂರ್ತಿ**

ನಡೆಸಬೇಕು, ಅಲ್ಲಿ ಶ್ರಮಿಸಿ ಬಂದವರಿಗೆ ಶ್ರಮಪರಿಹಾರಕ್ಕೆ ಅನುಕೂಲವಾಗುವಂತೆ ನಡೆಸಿಕೊಳ್ಳುತ್ತಿದ್ದಾನೆ.

## ಉಗ್ರಗಿರಿ

ಉಗ್ರಗಿರಿಗೆ ಹೋಗಬೇಕಾದರೆ ಅಲ್ಲಿ ಒಂದು ಸ್ವಚ್ಛವಾದ ಕೊಳವಿರುವುದು. ಅದರಲ್ಲಿ ಕೈಕಾಲುಗಳನ್ನು ಶುಚಿಮಾಡಿಕೊಂಡು ಮುಂದೆ ಹೊರಟರೆ ಹತ್ತಲು ಮೆಟ್ಟಿಲುಗಳು ಇರುವುವು. ಅರ್ಧದೂರದಲ್ಲಿ ಮಧ್ಯದಲ್ಲಿ ಬಿದಿರಿನ ಒಂದು ಪುಟ್ಟ ಆಶ್ರಮ ವಿರುವುದು. ಅದು ನೋಡಲು ಬಹಳ ಅಂದವಾಗಿರುವುದು. ಬಹುಶಃ ಅದು ಸ್ವಾಮಿಗಳು ವಿಶ್ರಾಂತಿ ಪಡೆಯಲು ಇರಬಹುದು. ಇನ್ನು ಸ್ವಲ್ಪದೂರ ನಡೆದರೆ, "ಉಗ್ರನರಸಿಂಹ"ನ ಆಲಯ ವಿರುವುದು, ಆಲಯವೆಂದು ಹೇಳುವ ಬದಲು "ಗುಹಾಲಯ'' ವೆನ್ನಬಹುದು. ಸಿಂಹವು ಗುಹೆಯಲ್ಲಿ ತಾನೇ ವಾಸಮಾಡುವುದು? ಹಾಗೆಯೇ, ಉಗ್ರಸಿಂಹನು ಗುಹೆಯಲ್ಲಿ ನಿಂತು ಪೂಜೆಗೊಳ್ಳುತ್ತಿದ್ದಾನೆ, "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು''ಎಂಬ ನಾಣ್ಣುಡಿಯಂತೆ ಭಗವಂತನು ರೂಪದಲ್ಲಿ ಬಹಳ ಸಣ್ಣ, ಆದರೆ ಮಾಡುತ್ತಿರುವುದು ರಕ್ಕಸನ ಅಂತ್ಯ. ಅದನ್ನು ವಸ್ತ್ರದಿಂದ ಮುಚ್ಚಿದ್ದಾರೆ. ಪೂಜೆ ಆದ ಮೇಲೆ ಆ ವಿಶ್ವರೂಪವನ್ನು ಭಕ್ತಾದಿಗಳಿಗೆ ತೋರಿಸುತ್ತಾರೆ. ಅವನನ್ನು ಸೇವಿಸಿದ ಭಕ್ತರಿಗೆಲ್ಲಾ ಹಿರಣ್ಯನಿಗೆ ದೊರಕಿದ ಮುಕ್ತಿಯೇ ದೊರಕುವುದು, ಇದರಲ್ಲಿ ಸಂಶಯವಿಲ್ಲ. ಅಲ್ಲಿ ಭಕ್ತ ಪ್ರಹ್ಲಾದನಿಗೆ ಅಭಯವಿತ್ತ ಕಾರಣ, ದಿನವಿಡೀ ಪೂಜೆ ನಡೆಯುತ್ತಿದೆ. ಮೇಲೆ ಲಕ್ಷ್ಮೀ ದೇವಸ್ಥಾನ ವಿದೆ. ಅಲ್ಲಿ ವಾಹನ ಉತ್ಸವಗಳೂ ಉಂಟು. ಕುದುರೆ ಉತ್ಸವ, ಹನುಮಂತೋತ್ಸವ, ಎಲ್ಲಾ ಬ್ರಹ್ಮೋತ್ಸವದಲ್ಲಿ ನಡೆಯುವುದು. ಆಗ ಯಾತ್ರಿಕರು ಅಲ್ಲಿಗೆ ಬಂದು ಉತ್ಸವಾದಿಗಳಲ್ಲಿ ಭಾಗವಹಿಸುತ್ತಾರೆ. ಇದು ಉಗ್ರಗಿರಿಯ ವೈಶಿಷ್ಟ್ಯ.

## ವರಾಹಗಿರಿ

ಬಹಳ ಕಡಿದಾದ ಈ ಗಿರಿಯನ್ನು ಹತ್ತಬೇಕಾದರೆ ಆ ಭಗವಂತನೇ ನಮ್ಮ ಸಹಾಯಕನಾಗಿ ನಡೆಸುತ್ತಾನೆ. ಅದು ಪ್ರಕೃತಿ ದೇವಿಯು ನಿರ್ಮಿಸಿದ ಮಾರ್ಗ. ಅದರಲ್ಲಿ ತಿಲದಷ್ಟು ಕೃತಕಮಾರ್ಗವಿಲ್ಲ, ಉಗ್ರಗಿರಿಯ ಹಿಂಭಾಗದಿಂದ ಹತ್ತಲು ಮಾರ್ಗವಿದೆ. ಅಲ್ಲಿ ನೀರು ಮಂಜಿನಂತೆ ಕೊರೆಯುತ್ತಾ ಯಾತ್ರಿಕರಿಗೆ ಮಾರ್ಗಾಯಾಸವನ್ನು ನೀಗಿಸಲು ಶಾಂತ ರೀತಿಯಿಂದ ಸದಾಕಾಲವೂ ಹರಿಯುತ್ತದೆ. ಅದರ ಪಕ್ಕದಲ್ಲಿ ಕಲ್ಲು ಬಂಡೆಗಳಿಂದ ಕೂಡಿದ ರಸ್ತೆ. ಅದನ್ನು ಹತ್ತಬೇಕಾದರೆ ಅವನ ನಾಮಸ್ಮರಣೆಯೇ ಮುಖ್ಯವಾದ ರಾಜಮಾರ್ಗ, ಎಲ್ಲೆಲ್ಲಿ ನೋಡಿದರೂ ಹಸಿರು ಹಚ್ಚನೆಯ ಮರಗಳು. ಅರಣ್ಯಮಾರ್ಗ, ಹಿಂದಿನ ಕಾಲದಲ್ಲಿ ಯಾರೂ ಹತ್ತಿಹೋಗುತ್ತಿರಲಿಲ್ಲವಂತೆ, ಕಾರಣ; ಅಲ್ಲಿ ದುಷ್ಟಮೃಗಗಳ ಕಾಟ ಹೆಚ್ಚಾಗಿತ್ತಂತೆ. ಈಗ ವರಾಹ ಸಿಂಹನೇ ದುಷ್ಟಮೃಗವಾದ – ಆ ಹಿರಣ್ಯಾಕನನ್ನು ಕೊಂದಮೇಲೆ ಯಾವ ಮೃಗಗಳ ಕಾಟವೂ ಇಲ್ಲದೇ, ಅರಣ್ಯ ಕಾಯುತ್ತಲಿದ್ದಾನೆ, ವರಾಹಮೂರ್ತಿ. ಇನ್ನು ಯಾವ ಭಯವೂ ಇಲ್ಲದೆ ಭಕ್ತರು ಹತ್ತಬಹುದು. ಅಲ್ಲಿ ಹೋದರೆ "ವರಾಹಮೂರ್ತಿ'' ಮತ್ತು "ಲಕ್ಷ್ಮೀನರಸಿಂಹ'' ಈ ಎರಡು ಮೂರ್ತಿಗಳೂ ಒಂದೇ ಆಲಯದಲ್ಲಿದ್ದಾರೆ. ಅಲ್ಲಿ ಅರ್ಚಕರಿಂದ ದಿನವೂ ಪೂಜೆ ನಡೆಯುವುದಿಲ್ಲ. ಬ್ರಹ್ಮೋತ್ಸವಕಾಲದಲ್ಲಿ ಮಾತ್ರ ಪೂಜೆ ನಡೆಯುವುದು. ಆ ದೇವಾಲಯವೂ ಸಹ ಗುಹೆಯೊಳಗಿದೆ. ನಾವು ಅದರಲ್ಲಿ ಮೆಲ್ಲಗೆ ಬಗ್ಗಿ ನಡೆದು ದೇವರಿಗೆ ಕರ್ಪೂರ ಆರತಿಮಾಡಿ ಆ ಬೆಳಕಿನಲ್ಲಿ ಪರಮಾತ್ಮನನ್ನು ಕಾಣಬೇಕು.

## ಮಾಲೋಲಗಿರಿ

ಲಕ್ಷ್ಮಿಯೊಡನೆ ಲೀಲಾಲೋಲ ನಾಗಿರುವ ಸ್ವಾಮಿ ಇಲ್ಲಿದ್ದಾನೆ. ಇದೂ ಸಹಾ ಕಾರ್ಗತ್ತಲೆಯ ಗುಡಿ.

ಇದನ್ನು ಹತ್ತಬೇಕಾದರೆ ವರಾಹಗಿರಿಗಿಂತ ಬಹಳ ಶ್ರಮಪಟ್ಟುಹತ್ತಿದರೆ ರಮಣೀಯ ದೃಶ್ಯಗಳನ್ನು ಕಾಣಬಹುದು. ಮಾರ್ಗವು ಬಹಳ ಕಡಿದಾಗಿದೆ. ಅಲ್ಲಿ ಮಾಲೋಲನು ರಕ್ಕಸನನ್ನು ಕೊಂದು, ಬಾಲನನ್ನು ರಕ್ಷಿಸಿ, ಶಾಂತವಾಗಿ ಮಹಾಲಕ್ಷ್ಮಿಯೊಡನೆ ನೆಲೆಸಿರುವ ಮೂರ್ತಿ ಇದೆ. ಆದ್ದರಿಂದ ಆ ಮೂರ್ತಿಗೆ 'ಮಾಲೋಲ'ನೆಂದು ಹೆಸರಾಯಿತು. ಈ ಗುಡಿಯೂ ಸಹ ಕತ್ತಲೆಯಿಂದ ಕೂಡಿದೆ, ಆದ ಕಾರಣ, ಇಲ್ಲಿಯೂ ಸಹಾ ಕರ್ಪೂರ ಆರತಿಯಿಂದಲೇ ಭಗವಂತನ ದರ್ಶನವನ್ನು ಪಡೆಯಬೇಕು. ಗುಡಿಯು ಬಹಳ ಶಿಥಿಲವಾಗಿದೆ. ಹಾಗೇ ಕಲ್ಲುಗಳನ್ನು ಜೋಡಿಸಿ ಇಡಲ್ಪಟ್ಟಿದೆ, ಇಲ್ಲಿ ಗರುಡಗಂಭ ದೇವರಪಾದ ಮತ್ತು 'ತಿರುಮಂಗೈಆಳ್ವಾರ್' ಶಿಲಾರೂಪಗಳಲ್ಲಿದ್ದಾರೆ. ಇಲ್ಲಿ ಈಗ 'ಅಳ ಸಿಂಗರ್' ಆರಾಧಿಸಿತ್ತಿರುವ 'ಲಕ್ಷ್ಮೀನರಸಿಂಹ'ನ ಸ್ವರ್ಣವಿಗ್ರಹವು ದೊರಕಿತೆಂದು ಪ್ರತೀತಿಯಾಗಿದೆ, ಅದೇ ಅಲ್ಲಿನ ಮುಖ್ಯಾಂಶ ಮತ್ತು ಇಲ್ಲಿ ಧನುರ್ಮಾಸದಲ್ಲಿ ದೇವರಿಗೆ ಒಂದು ತಿಂಗಳಪೂಜೆ ಸಲ್ಲುವುದು. ಆ ಸಮಯದಲ್ಲಿ ಸರ್ವರೂ ಭಗವಂತನ ತೇಜೋಮಯವಾದ ಸಂದರ್ಶನವನ್ನು ಪಡೆದು ಧನ್ಯರಾಗಬಹುದು.

ಭಕ್ತಪ್ರಹ್ಲಾದನಪಡಿ : ಆ ಮೆಟ್ಟಿಲನ್ನು ಹತ್ತಲು ಬಹಳ ಕಷ್ಟ. ಕಾರಣ ಮೆಟ್ಟಿಲುಗಳು ಬಹಳ ಚಿಕ್ಕದಾಗಿ, ಇಕ್ಕಟ್ಟಾಗಿರುವುದು. ಇಲ್ಲಿ ಪ್ರಹ್ಲಾದನ ವಿದ್ಯಾಮಂದಿರ ವಿದೆ. ಅಂದರೆ ಈಗ ದೊಡ್ಡದಾದ ಖಾಲಿ ಜಾಗವಿದೆ. ಅದೇ ಅವನ ವಿದ್ಯಾಮಂದಿರವಾಗಿದ್ದಿತಂತೆ. ಇಲ್ಲಿ ಯೋಗಾನರಸಿಂಹನ ಆಲಯ ನರಹರಿಯು ತಾನೆತ್ತಿದ ಕಾರ್ಯ ಪೂರ್ಣಗೊಳಿಸಿದಮೇಲೆ ವೈರಾಗ್ಯದಿಂದ 'ಯೋಗಾಸನ'ದಲ್ಲಿ ಎಲ್ಲವನ್ನು ತ್ಯಜಿಸಿ. ಸರ್ವರಿಗೂ ಸೇವೆ ನೀಡುತ್ತಲಿದ್ದಾನೆ. ಮತ್ತು ಇಲ್ಲಿಂದಲೇ ದುರುಳ ಹಿರಣ್ಯಕನು ಹಸುಳೆಯಾದ ಪ್ರಹ್ಲಾದನನ್ನು ಬೆಟ್ಟದಿಂದ ಕೆಳಗೆ ತಳ್ಳಿದನೆಂದು ತಿಳಿದು ಬಂದಿದೆ. ಇದರಿಂದ ಅದಕ್ಕೆ ' ಪ್ರಹ್ಲಾದಪಡಿ ' ಎಂದು ಪ್ರತೀತಿಯಾಗಿದೆ.

## ಜ್ವಾಲಾನಂದಗಿರಿ

ಈ ಬೆಟ್ಟಕ್ಕೆ ನಾಲ್ಕು ಮೈಲಿ ನಡೆದು ಹೋಗಬೇಕು. ಅಲ್ಲಿ ನರಸಿಂಹನು ಕಣ್ಣಿನಲ್ಲಿ ಕಿಡಿಕಾರುತ್ತಾ ದುರುಳ ರಕ್ಕಸನ ಕರುಳನ್ನು ಬಗೆದು, ಕಿಡಿಯ ಜ್ವಾಲೆಯಿಂದ ರಕ್ಕಸನನ್ನು ಕೈಯಿಂದ ಹಿಂಡುತ್ತಾ ಉಗ್ರರೂಪಿಯಾಗಿ

(38 ನೇ ಪುಟ ನೋಡಿ)

# ಮುಳಬಾಗಿಲಿನ ಶ್ರೀಆಂಜನೇಯಸ್ವಾಮಿ

'ತಿರುಪತಿ' ಯಾತ್ರೆ ಮಾಡಿದವರಿಗೆ ಮುಳಬಾಗಿಲು ಅಪರಿಚಿತವೇನಲ್ಲ. ಕರ್ನಾಟಕದ ಸರಹದ್ದಿನಲ್ಲಿರುವ ಈ ಪ್ರದೇಶವು ಪ್ರಮುಖ ಯಾತ್ರಾ ಸ್ಥಳವೂ ಆಗಿದೆ. ಇಲ್ಲಿ ಶೈವ–ವೈಷ್ಣವ ಸಂಪ್ರದಾಯಗಳ ಸಂಗಮವಾಗಿರುವಂತೆ ಶ್ರೀವೈಷ್ಣವ ಹೊಳೆಯೂ ಹರಿಯುತ್ತಿದೆ. ಪ್ರಸನ್ನ ಸೋಮೇಶ್ವರ, ಆಂಜನೇಯ, ವಿಠಲನಾರಾಯಣ, ಲಕ್ಷ್ಮೀನಾರಾಯಣರ ಆರಾಧ್ಯ ಸ್ಥಳವಾಗಿರುವ ಇಲ್ಲಿ ಮಾರುತಿಯ ದೇವಾಲಯವೊಂದು ವೈಜಯಂತಿಯಂತೆ ಕಂಗೊಳಿಸುತ್ತಿದೆ.

ಗಿರಿ–ಶಿಖರ–ಕಾನನಗಳು ತಮ್ಮ ಪ್ರಾಚೀನತೆಯನ್ನು ಸಾರುವಂತೆ ದೇವಾಲಯಗಳ ಹಳಮೆಯ ಡಂಗುರಕ್ಕೆ ಉಲ್ಲೇಖಗಳು ಕಡಿಮೆ. ಮಾನವನ ವಿಕಾಸ ಹೊಂದಿಗೇ ಬೆಳೆದು ಕೊಂಡು ಬಂದ ದೈವಶ್ರದ್ಧೆ, ನಂಬಿಕೆಗಳು ಒಂದು ರೂಪವನ್ನು ಪಡೆಯುತಷ್ಟೆ. ಇಂತಹ ದೈವಾರಾಧನೆಯ ಪ್ರಾಚೀನತೆಗೆ ಕುರುಹಾಗಿ ಇಂದಿಗೂ ಉಳಿದುಕೊಂಡು ಬಂದಿರುವ ದೇವರುಗಳಲ್ಲಿ ಗಣೇಶ–ಆಂಜನೇಯರ ಪಾತ್ರ ಮಹತ್ತರವಾದದ್ದಾಗಿದೆ. ಪ್ರಾಚೀನ ಜನಾಂಗಗಳಲ್ಲಿ ಇವರು ಪಡೆದುಕೊಂಡ ಸ್ಥಾನ ಮುಖ್ಯವಾಗಿ ಎದ್ದು ಕಾಣಬರುತ್ತದೆ. ಇಂತಹುದೊಂದು ಜಾನಪದ ಹಿನ್ನೆಲೆ ಅಂಜನೇಯನ ಆರಾಧನೆಯ ಹಿನ್ನೆಲೆಗೆ ಒದಗಿ ಬಂದಿದೆ.

ಮುಳಬಾಗಿಲು ಅನೇಕ ರಾಜ ವಂಶದವರಿಗೆ 'ಸಂಸ್ಥಾನ'ವಾಗಿತ್ತು. ಇಲ್ಲಿ ಪ್ರತಿಷ್ಠಿತ ರಾಜಕುಟುಂಬಗಳು ಆಳಿದು ಹೋಗಿವೆ ಹಾಗಿಯೇ ಇಲ್ಲಿನ ಆಂಜನೇಯನ ಕೀರ್ತಿ–ಪ್ರತಿಷ್ಠೆಗಳೂ ಸಹಾ ದ್ವಾಪರಯುಗಕ್ಕೆ ಸಂಬಂಧಿಸಿದೆ. ಈ ಮಾರುತಿಯ ಮೂರುತಿಯನ್ನು ಪ್ರಾರ್ಥನೇ ಸ್ಥಾಪಿಸಿದನೆಂಬ ಹೇಳಿಕೆಯಿದೆ. ಪ್ರತಿದಿನವು ತಾಳೆ ಹೂವಿನಿಂದ ಪೂಜೆ ನೆರವೇರಬೇಕೆಂದು ಅತನೇ ಅಪ್ಪಣೆಕೊಡಿಸಿದನೆಂಬ ಹೇಳಿಕೆಯೂ ಇದೆ. ದೇವಸ್ಥಾನಕ್ಕೆ ನೇರವಾಗಿ ಕಾಣುವ 'ಗಿರಿ' ಯನ್ನು ಅಂಜನಾದ್ರಿಯೆಂದು ಕರೆಯಲಾಗುತ್ತಿದೆ. ಅಂಜನಾಸುತನಾದ ಆಂಜನೇಯ ಲಕ್ಷ್ಮಣನಿಗಾಗಿ ಸಂಜೀವಿನಿ ಪರ್ವತವನ್ನು ಎತ್ತಿಕೊಂಡು ಹೋಗುವಾಗ ಸಣ್ಣದೊಂದು ಕಲ್ಲು ಇಲ್ಲಿ ಬಿದ್ದು ಪರ್ವತವಾಯಿವೆಂಬ, ಪರ್ವತಗಳ ಉಗಮಕ್ಕೆ 'ವಿರೋಧಾಭಾಸ' ವನ್ನು ಉಂಟುಮಾಡುವ ಕಥೆಯೊಂದು ಪ್ರಚಲಿತವಾಗಿದೆ. ಆಂಜನೇಯ ಅಥವಾ ಪ್ರಾಣದೇವರ ಆರಾಧನೆಯೊಂದಿಗೆ ಇಂತಹ ಪ್ರಕೃತಿಯ ಆವರಣಗಳ ನಂಟನ್ನು ಗಂಟು ಹಾಕುವುದರಲ್ಲಿ ಆಯಾ ದೈವಗಳ ವಿಶಿಷ್ಟತೆಗಳೂ ಹಾಗೂ ಬೌದ್ಧಿಕ ನೆಲೆ–ಹಿನ್ನೆಲೆಗಳು ಅರಿವಾಗಬಹುದೆಂಬ ಪ್ರಬಲ ಕಾರಣ ಈ ದಂತಕತೆಗಳ ಹಿನ್ನೆಲೆಯಲ್ಲಿರಬಹುದು. ಆಂಜನೆಯನ ದೇವಾಲಯವು ವಿಶಾಲವಾದ ಅವರಣವನ್ನು ಹೊಂದಿದೆ.

**ಶ್ರೀ ಕೆ. ಆರ್. ನರಸಿಂಹನ್**

ಇಲ್ಲಿಯೇ ರಾಮದೇವರ ದೇವಾಲಯವಿದೆ. ಚಾರಿತ್ರಿಕವಾಗಿ ಇದು ತುಂಬಾ ಹಳೆಯದಾಗಿರಲು ಸಾಧ್ಯವಿದೆ. ಶ್ರೀನಿವಾಸ, ಗೋವಿಂದರಾಜಸ್ವಾಮಿ ಹಾಗೂ ವರದರಾಜರು ಈ ಆವರಣದಲ್ಲಿ ಪ್ರತಿಷ್ಠಿತರಾಗಿದ್ದಾರೆ. ಈ ಮೂರ್ತಿಗಳಲ್ಲಿ ಒಟ್ಟಾಗಿ ಇಲ್ಲಿ ನೆಲೆ ನಿಂತಿರುವುದು 'ಮತ್ತೊಂದು ತಿರುಪತಿ' ಇದೆಂಬ ಭಾವನೆಯನ್ನು ಬಡಿದೆಬ್ಬಿಸುವಂತಿದೆ ತಿರುಪತಿಗೆ ಹೋಗುವ ಯಾತ್ರಿಕರಿಗೆ ಮಾರುತಿಯ ದರ್ಶನಾಕಾಂಕ್ಷೆಯ ಹಂಬಲದ ಹಸಿವು ಈ ಎತ್ತರವಾದ ಮೂರ್ತಿಯನ್ನು ನೋಡಿದಾಗ ತಣಿಯುವುದರಲ್ಲಿ ಸಂದೇಹವೇ ಇಲ್ಲ.

ವಿಜಯನಗರ ಕಾಲದವರ ಗೋಪುರ, ಅಂಗಳ, ಪ್ರಾಕಾರಗಳು ಈ ದೇವಾಲಯಕ್ಕೆ ಬಂದು ವಿಶೇಷ ಮೆರಗನ್ನು ನೀಡಿದೆ. ಕೆತ್ತನೆಯ ಯಾವುದೇ ಆಕರ್ಷಣೆಗಳಿಲ್ಲದೆ. ಸಾಧಾರಣವಾಗಿ ಇರುವುದಾದರೂ ಅಂಜನೇಯನ ಎತ್ತರವು ಭವ್ಯತೆಯ ಕಲ್ಪನೆಯನ್ನೂ ಹೆಚ್ಚಿಸುತ್ತದೆ. ದೇವಾಲಯದ ಒಳ ಆವರಣದಲ್ಲಿರುವ 'ದಶಾವತಾರ'ದ ಚಿತ್ರಗಳು (ಇತ್ತೀಚೆಗೆ ಹೊಸದಾಗಿವೆ) ಆಕರ್ಷಣೀಯವಾಗಿವೆ. ಅಲಂಕಾರದ ಮಂಟಪದಲ್ಲಿ ಬಿಡಿಸಿರುವ ತೈಲ ಚಿತ್ರಗಳು ಸುಂದರಹಾಗೂ ಮನೋಹರವಾಗಿವೆ ರಾಜಾ ತೋದರಮತ ಹಾಗೂ ಆತನ ಪತ್ನಿಯರದೆಂಬ ಇಲ್ಲಿ ನಿಂತಿರುವ ವಿಗ್ರಹಗಳೆರಡು ಈ ದೇವರ ರಾಜಕೀಯ ಪ್ರತಿಷ್ಠೆಗೆ ನಿದರ್ಶನವಾಗಿದೆ. ಬಸ್ ನಿಲ್ದಾಣದ ಸಮೀಪದಲ್ಲಿಯೇ ಇರುವುದು ಈ ದೇವರ ದರ್ಶನಕ್ಕೆ ಒದಗಿಬಂದಿರುವ ಅನುಕೂಲವಾಗಿದೆ. ದೇವಾಲಯದ ಉನ್ನತಿ ಹಾಗೂ ಅಭಿವೃದ್ಧಿಗಾಗಿ ನಡೆಯುತ್ತಿರುವ ಸಂರಕ್ಷಣಾಕಾರ್ಯಗಳು ಶ್ಲಾಘನೀಯ ಹಾಗೂ ಸ್ವಾಗತಾರ್ಹ. 'ಕಂಟಕಾನನ'ವು ಇಂದು ಮುಳಬಾಗಿಲಾಗಿದೆ. ಇಲ್ಲಿಗೆ ಬರುವ ಭಕ್ತರ ಕಂಟಕಗಳನ್ನು ಹೋಗಲಾಡಿಸುವ ಸ್ಥಳವಾಗಿದೆ. ಕೇವಲ ಕಣ್ತುಂಬಿವ ನೋಟವನ್ನು ಮಾತ್ರವಲ್ಲದೆ ಮನ ತುಂಬಿ ಹೊರಗೆ ಹರಿಯುವ ದೇವಾಲಯ ಇದಾಗಿದೆಯೆಂಬುದು ಅಸತ್ಯವೇನಲ್ಲ. ಹೀಗೆ ಆಂಜನೇಯನ ಕಾರ್ಯಕ್ಷಮತೆ ಮತ್ತು ಸಿದ್ಧಿಗಳ ಶಿಬಿರವಾಗಿರುವ ಮುಳಬಾಗಿಲು 'ದೇವಾಲಯಗಳ ಗೊಂಡಾರಣ್ಯ' ವಾಗದೆ ಉದ್ಯಾನವಾಗಲಿ ಎಂಬ ಮನೋಗತ ನಮ್ಮೆಲ್ಲರದಾಗಲಿ ಎಂದು ಆಶಿಸೋಣ. ★



ಆಂಜನೇಯಸ್ವಾಮಿ
ಚಿತ್ರ; ಕೆ. ಸೋಮಶೇಖರ್.

# ನಾಳೆ ಮಾಡುವುದನಿಂದೇ ಮಾಡಿ
# ಇಂದು ಮಾಡುವುದನೀಗಲೇ ಮಾಡಿ

(ಮಹಾಭಾರತ 12 - 6534)

## ಕಾಲ ತರಂಗವಾರಿಗೂ ಕಾಯದು
## ಉಳಿತಾಯ ಮಾಡಲಿದುವೆ ಸುಸಮಯ

**ನಮ್ಮ ಬ್ಯಾಂಕ್‌ನ ಸುಪ್ರಸಿದ್ಧ ಬಹುಮುಖ ಉಳಿತಾಯ ಯೋಜನೆಗಳಲ್ಲಿ ತಮ್ಮ ಹಣವನ್ನು ಕೂಡಿಸಿರಿ.**

**ತಮ್ಮ ಅಗತ್ಯಗಳ ಪೂರೈಕೆಗೆ ಈ ಉಳಿತಾಯ ಬಳಕೆಗೆ ಬರುವಂತೆ ನಾವು ಮಾಡುತ್ತೇವೆ.**

ಹೆಚ್ಚಿನ ವಿವರಗಳಿಗಾಗಿ:

**ನಮ್ಮ ಯಾವುದೇ ಶಾಖೆಯನ್ನು ಸಂದರ್ಶಿಸಿ ಅಥವಾ ಬರೆಯಿರಿ.**

# ದಿ ಕರೂರ್ ವೈಶ್ಯ ಬ್ಯಾಂಕ್ ಲಿಮಿಟೆಡ್

ನೊಂದಾಯಿತ ಕೇಂದ್ರ ಕಚೇರಿ : ಜವಹರ್ ಬಜಾರ್,

## ಕರೂರ್ ೬೩೯೦೦೧



**ತಮ್ಮನ್ನು ಅಭಿವೃದ್ಧಿಯತ್ತ ಕರೆದೊಯ್ಯುವ ಬ್ಯಾಂಕ್**

ಜಿ. ವೆಂಕಟೇಶಂ,
ಛೇರ್ಮನ್.

## ಮಧ್ಯಕಾಲೀನ ಉತ್ತರ ಭಾರತದಲ್ಲಿ

# ಭಕ್ತಿಪ್ರಸಾರ

ಭಾರತದ ಇತಿಹಾಸದಲ್ಲಿ ಪರಿವರ್ತನೆಯ ಘಟ್ಟವೊಂದು ಮೂಡಿದ್ದಿತು. ಅದಕ್ಕೂ ಮೊದಲು ಉತ್ತರಭಾರತದ ಚರಿತ್ರೆಯೇ ಬೇರೆಯಾಗಿದ್ದಿತು. ಮ್ಲೇಚ್ಛ ಆಕ್ರಮಣದಿಂದ ದೇಶ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ವಿದೇಶಿಯರ ಪಾಲಾದಾಗ ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯಗಳು ಏಳಿಗೆ ಹೊಂದುವುದಂತೂ ಕನಸಿನ ಮಾತೇ ಸರಿ. ಉತ್ತರ ಭಾರತದಲ್ಲಿನ ರಾಜಮನೆತನಗಳೆಲ್ಲವೂ ದಿಲ್ಲಿಯ ಬಾದಶಹನ ಆಡಳಿತಕ್ಕೊಳಪಟ್ಟು ಹಿಂದೂಧರ್ಮವೇ ನಶಿಸಿಹೋಗುವಂತಹ ಪರಿಸ್ಥಿತಿ ಒದಗಿದ್ದಿತು. ಅಷ್ಟೇ ಅಲ್ಲದೆ ವಿದೇಶಿಯರ ಸಂಸ್ಕೃತಿ ಅವರ ವಿಲಾಸ ವೈಖರಿಗಳು ಹಿಂದೂ ಸಮಾಜದ ಮೇಲೆಯೂ ಪ್ರಭಾವ ಬೀರಿದ್ದವು. ಅಂತೆಯೇ ಹಿಂದೂಗಳು ವಿಲಾಸ ಭೋಗಗಳಲ್ಲಿ ಮುಳುಗಿ ಹೋಗಿದ್ದರು. ಹಿಂದೂ ಸಮಾಜದಲ್ಲಿ ಉಚ್ಚವರ್ಣಗಳವರು ವಿಲಾಸದ ರಂಗಿನಲ್ಲಿ ಮೈಮರೆತಿದ್ದರೆ, ಏನೂ ತಿಳಿಯದ ಅನಕ್ಷರಸ್ಥರಾದ ಕೆಳಜಾತಿಯ ಜನಗಳು ಅಶಿಕ್ಷಿತರಾಗಿ ಒರಟಾದ ನಡವಳಿಕೆಗಳನ್ನುಳ್ಳವರಾಗಿದ್ದರು. ಮನೆ–ಮಠ–ಪರಿವಾರಗಳನ್ನು ತ್ಯಜಿಸಿ ಸನ್ಯಾಸಿಯಾಗಿ ಹೊರಟು ಹೋಗುವುದು ಅಂದು ಸರ್ವೇಸಾಮಾನ್ಯವಾದ ವಿಷಯವಾಗಿದ್ದಿತು. ಮನಸ್ಸಿಗೆ ಬೇಸರವುಂಟು ಮಾಡುವಂತಹ ಘಟನೆ ಏನಾದರೂ ನಡೆದರೆ ಕೂಡಲೇ ಆ ವ್ಯಕ್ತಿ ವೈರಾಗ್ಯಪರನಾಗುತ್ತಿದ್ದ.

ಒಂದೆಡೆ ನಾಥಪಂಥದವರ ವಿಪರೀತವಾದ ಚಟುವಟಿಕೆಗಳು, ಮತ್ತೊಂದೆಡೆ ಬೌದ್ಧ ಧರ್ಮ ಜೈನಧರ್ಮಗಳ ಅಹಿಂಸಾವಾದ, ಶೂನ್ಯವಾದ–ದೇವರಿಲ್ಲವೆಂಬ ಖಂಡನೆ–ಇದು ಸಾಲದೆಂಬಂತೆ ಮ್ಲೇಚ್ಛರಿಂದ ಹಿಂದೂ ದೇವ, ದೇವತೆಗಳ ನಾಶ, ಹಿಂದೂ ಜನಗಳ ಮೇಲೆ ಬರ್ಬರವಾದ ಅತ್ಯಾಚಾರ–ಇವೆಲ್ಲವೂ ಒಟ್ಟಾಗಿ ಹಿಂದೂಗಳನ್ನು ದಾರಿತಪ್ಪಿಸುವಲ್ಲಿ ಸಫಲವಾಗಿದ್ದಿತು. ಒಮ್ಮೆ 'ಕೃಷ್ಣಾ' ಎಂದೊಡನೆಯೇ ದ್ರೌಪದಿಯನ್ನು ಬಂದು ಕಾಪಾಡಿದ ಪರಮಾತ್ಮ, 'ನಾರಾಯಣ' ಎಂದು ಸಾಯುವ ಕಾಲದಲ್ಲಿ ಹೇಳಿದಾಕ್ಷಣ ಅಜಾಮಿಳನನ್ನು ರಕ್ಷಿಸಿದ ಭಗವಂತ, ಹಿಂದೂಗಳ ಎದುರಿಗೇ ಹಿಂದೂ ದೇವರುಗಳ ಭಂಜನ, ಪತನಗಳಾಗುತ್ತಿದ್ದಾಗ ಏನೂ ಮಾಡಲಾರದಾಗಿದ್ದ. ತನ್ನನ್ನೇ ಸ್ವತಃ ರಕ್ಷಿಸಿಕೊಳ್ಳಲಾರದ ಭಗವಂತನ್ನ ಮೇಲೆ – ತಾವು ಅದುವರೆಗೂ ನಂಬಿಕೊಂಡು ಬಂದಿದ್ದ ದೇವರುಗಳ ಮೇಲೆಯೇ ನಂಬಿಕೆ ಹೊರಟು ಹೋಗುವಂತಹ ಸ್ಥಿತಿ ಹಿಂದೂಗಳಿಗೆ ಉಂಟಾಯಿತು. ಇಡಿಯ ಹಿಂದೂ ಧರ್ಮವೇ ಖಿಲವಾಗಿ ಹೋಗುವಂತಹ ಸನ್ನಿವೇಶ ಬಂದಿತು. ಮುಗ್ಧರಾದ ಜನಗಳನ್ನು ನಾನಾ ರೀತಿಗಳಿಂದ ವಂಚಿಸುವ ಸಾಧುಸಂತರ, ವಾಮಮಾರ್ಗಿಗಳ ಗುಂಪುಗಳಂತೂ ಆ ಕಾಲದಲ್ಲಿ ಅಪರಿಮಿತವಾಗಿದ್ದಿತೆಂದೇ ಹೇಳಬೇಕು. ಆ ಕಾಲದಲ್ಲಿ ಪಂಡಿತರು, ವಿದ್ವಾಂಸರು ಎನಿಸಿಕೊಂಡವರು ತಮ್ಮ ತಮ್ಮ ವಿದ್ಯೆಗಳಿಂದ ಗರ್ವಿತರಾಗಿ ಮೆರೆಯುತ್ತಿದ್ದರೇ ವಿನಃ ಪತನಹೊಂದುತ್ತಿರುವ ಹಿಂದೂ ಸಮಾಜವನ್ನಾಗಲಿ, ಅಥವಾ ಮುಗ್ಧರಾದ ಹಿಂದೂ ಜನಗಳಿಗೆ ತಿಳುವಳಿಕೆಯನ್ನುಂಟು ಮಾಡಿ ಅವರನ್ನು ಉದ್ಧರಿಸುವಂತಹ ಕಾರ್ಯಗಳನ್ನಾಗಲೀ ಮಾಡುತ್ತಿರಲಿಲ್ಲ. ಇಡೀ ದೇಶದಲ್ಲಿನ ಹಿಂದೂ ಸಮಾಜವೇ ಆದರ್ಶಹೀನವಾಗಿಯೂ, ಯಾವುದೇ ಗುರಿಯನ್ನು ಹೊಂದದೆ ಇರುವಂತಹದೂ ಆಗಿದ್ದಿತೆಂದು ಹೇಳಬಹುದು.

**ಶ್ರೀ ಕೆ. ರಮಾನಂದ,** ಎಂ.ಎ.,

ಸ್ವಾತಂತ್ರ್ಯವನ್ನು ಕಳೆದುಕೊಂಡು, ದೇವರಲ್ಲಿನ ನಂಬಿಕೆಯನ್ನು ಹೋಗಲಾಡಿಸಿಕೊಂಡು; ಹಿಂದೂ ಧರ್ಮದ ಮೂಲತತ್ತ್ವಗಳನ್ನೇ ಭ್ರಷ್ಟಗೊಳಿಸಿಕೊಳ್ಳುತ್ತಾ ವಿಲಾಸ ಭೋಗಗಳಲ್ಲಿ ಮುಳುಗಿದ್ದ ಹಿಂದೂ ಜನಗಳ ಉದ್ಧಾರವಾಗುವುದಾದರೂ ಹೇಗೆ? ಹಿಂದೂಧರ್ಮ ಇಂದಿಗೂ ಉಳಿಯುವಂತೆ ಮಾಡಿದ ಪ್ರೇರಕ ಶಕ್ತಿ ಯಾವುದು? ನಾಸ್ತಿಕವಾದವನ್ನು ಖಂಡಿಸುತ್ತ ದೇವರಿದ್ದಾನೆ, ಅವನು, ಸಗುಣ–ಸಾಕಾರ ರೂಪನು. ಅವನು ನಿರಾಕಾರನಲ್ಲ, ನಿರ್ಗುಣನಲ್ಲ, ಅವನನ್ನು ನಂಬಿದವರು ಎಂದೂ ವಂಚಿತರಾಗುವುದಿಲ್ಲ, ಎಂದು ಭಗವಂತನ ಅಸ್ತಿತ್ವವನ್ನು ಜನಗಳಲ್ಲಿ ಪ್ರಚುರಪಡಿಸಿದ ಕೀರ್ತಿ ಅನೇಕ ಸಂತರಿಗೆ ಸಲ್ಲುತ್ತದೆ. ಡೋಂಗಿ ಸಂತರ ವ್ಯವಹಾರಗಳೆಲ್ಲವೂ ಬಯಲಾಗುವ ಕಾಲ ಬಂದಿತು. ಧರ್ಮದ ಬಗೆಗೂ ದೇವರ ವಿಚಾರದಲ್ಲಿಯೂ ಜನಗಳಲ್ಲಿ ಸರಿಯಾದ ಜಾಗೃತಿಯನ್ನುಂಟು ಮಾಡುವಲ್ಲಿ ಉತ್ತರ ಭಾರತದಲ್ಲಿದ್ದ ಅನೇಕ ಸಂತರು ಸಫಲರಾದರು. ಸಂತರ ಭಕ್ತಿ ಪ್ರಚಾರದ ಕಾರ್ಯ ಸಫಲವಾಗತೊಡಗಿತು. ಈ ಸಂತರಲ್ಲಿ ಕೆಲವರು ತಮ್ಮ ಆರಾಧ್ಯದೈವವನ್ನಾಗಿ ರಾಮನನ್ನು ಆರಿಸಿ ಕೊಂಡರೆ ಮತ್ತೆ ಕೆಲವು ಸಂತರು ಕೃಷ್ಣನ ಉಪಾಸಕರಾಗಿದ್ದರು. ವಿಷ್ಣುವಿನ ಅವತಾರಗಳಾದ ರಾಮ, ಕೃಷ್ಣರ ಆರಾಧನೆ ಹೆಚ್ಚಾಗತೊಡಗಿತು. ಹೀಗೆ ರಾಮಭಕ್ತಿ ಶಾಖೆ, ಕೃಷ್ಣಭಕ್ತಿ ಶಾಖೆ ಎಂಬ ಎರಡು ಕವಲುಗಳಲ್ಲಿ ಉತ್ತರ ಭಾರತದಲ್ಲಿ ಭಕ್ತಿಯ ಪ್ರಚಾರ ಆರಂಭವಾಯಿತು. ಅವರವರ ಇಷ್ಟ ದೇವತಾ ಆರಾಧನೆಯಂತೆ ಜನಗಳಿಗೆ ರಾಮುನನ್ನಾಗಲಿ ಕೃಷ್ಣನನ್ನಾಗಲಿ ಪೂಜಿಸುವ ಅವಕಾಶ ದೊರಕಿತು. ರಾಮಭಕ್ತಿ ಶಾಖೆ, ಕೃಷ್ಣಭಕ್ತಿ ಶಾಖೆಗಳು ಹೆಚ್ಚು ಪ್ರಚುರಗೊಳ್ಳಲು, ಮೂಲ ಕಾರಣವಾಗಿ ದಕ್ಷಿಣ ಭಾರತದಿಂದ ಮೂಡಿಬಂದ ಭಕ್ತಿಪಂಥದ ತತ್ತ್ವಗಳೂ ಅವುಗಳಲ್ಲಿ ಒಳಗೊಂಡಿದ್ದುದೇ ಕಾರಣವೆಂದು ಹೇಳ ಬಹುದು. ರಾಮನನ್ನು ಪೂಜಿಸುವರು ರಾಮಭಕ್ತಿ ಶಾಖೆಯ ಪ್ರತಿನಿಧಿಗಳೂ, ಕೃಷ್ಣನನ್ನು ಭಜಿಸುವರು ಕೃಷ್ಣಭಕ್ತಿ ಶಾಖೆಯ ಪ್ರತಿನಿಧಿಗಳೂ ಆಗಿದ್ದರು. ಈ ಎರಡೂ ಶಾಖೆಗಳಲ್ಲಿನ ಅಸಂಖ್ಯಾತ ಸಂತರು ಧರ್ಮದ ರಕ್ಷಣೆಗಾಗಿ, ಧಾರ್ಮಿಕ ಜಾಗೃತಿಗಾಗಿ, ಹಿಂದೂಗಳ ಉದ್ಧಾರಕ್ಕಾಗಿ ಬಹಳವಾಗಿ ಶ್ರಮಪಟ್ಟರು.

ಆಧ್ಯಾತ್ಮಿಕ ಜ್ಞಾನವನ್ನೇ ಕಳೆದು ಕೊಂಡು ಸಾಂಸಾರಿಕ ಸುಖ–ಭೋಗಗಳಲ್ಲಿ ಮಗ್ನರಾಗಿದ್ದ ಜನಗಳು ಜಾಗೃತರಾಗುವ ಕಾಲ ಬಂದೇ ಬಂದಿತು. ಜನಜಾಗೃತಿಯನ್ನುಂಟು ಮಾಡಬಲ್ಲ, ಧರ್ಮದ ದೀಪ್ತಿ ಆಳಿಸಿ ಹೋಗದಂತೆ ಕಾಪಾಡಬಲ್ಲ ಮಹಾಚೇತನವೊಂದು ಉದ್ಭವಿಸಿತು. ಆ ಮಹಾಚೇತನವೇ ಭಕ್ತ ಶಿರೋಮಣಿಯೆಂದು ಖ್ಯಾತನಾಮರಾದ ತುಲಸೀದಾಸರು. ತುಲಸೀದಾಸರ ಪ್ರಸಿದ್ಧ ಗ್ರಂಥವೇ 'ರಾಮಚರಿತ ಮಾನಸ'. ರಾಮಚರಿತಮಾನಸ ಹೆಸರೇ ಹೇಳುವಂತೆ ರಾಮಾಯಣದ ಕಥೆಯನ್ನು ಕಾವ್ಯರೂಪವಾಗಿ

ಒಳಗೊಂಡ ಕೃತಿಯಾಗಿದೆ. ಹಾಗೆಂದರೆ ತುಲಸೀದಾಸರ ಕಾಲಕ್ಕಿಂತಲೂ, ಅವರ ಆವಿರ್ಭಾವಕ್ಕಿಂತಲೂ ಹಿಂದೆ ರಾಮನನ್ನು ಕುರಿತಂತೆ, ರಾಮಾಯಣದ ಕಥೆಯನ್ನು ಅಳವಡಿಸಿಕೊಂಡಿರುವ ಗ್ರಂಥಗಳು ಬಂದಿಲ್ಲವೆಂದಲ್ಲ.

ಶ್ರೀರಾಮನ ಪೂರ್ಣಚರಿತ್ರೆಯನ್ನು ಕಾವ್ಯಮಯವಾಗಿ ವರ್ಣಿಸುವಲ್ಲಿ ವಾಲ್ಮೀಕಿ ಸಫಲರಾಗಿದ್ದಾರೆ. ರಾಮಾಯಣ ಮಹಾಕಾವ್ಯದ ವರ್ಣನೆಗಳು, ರಸಪ್ರತಿಪಾದನೆ, ಪಾತ್ರಗಳ ನಿರೂಪಣೆ ಅಲಂಕಾರಗಳನ್ನು ಬಳಸಿಕೊಂಡಿರುವ ವಿಧಾನ ಭಾಷೆ, ಶೈಲಿ – ಎಲ್ಲವೂ ಅದ್ಭುತವಾದುದಾಗಿದೆ. ಭಾರತೀಯರ ಮೋಕ್ಷ ಸಾಧಕ ಗ್ರಂಥ ರಾಮಾಯಣವೆಂದರೂ ತಪ್ಪಾಗಲಾರದು. ರಾಮನಂತಹ ಆದರ್ಶ ವ್ಯಕ್ತಿಯೊಬ್ಬನನ್ನು ನಾಯಕನನ್ನಾಗಿ ಮಾಡಿಕೊಂಡು ಹೆಣೆಯಲಾದ ಈ ಮಹಾಕಾವ್ಯದಲ್ಲಿ ರಾಮನನ್ನು ಮನುಷ್ಯನಂತೆ, ಮಹಾತ್ಮನಂತೆ, ಒಬ್ಬ ಧೀರೋದಾತ್ತ ನಾಯಕನಂತೆ, ಚಿತ್ರಿಸಲಾಗಿದೆ. ರಾಮ ಎಲ್ಲರಿಗೂ ಆದರ್ಶಪ್ರಾಯನಾಗಿದ್ದಾನೆ. ರೂಪಿನಲ್ಲಾಗಲಿ, ಗುಣದಲ್ಲಾಗಲಿ ಸೌಜನ್ಯದಲ್ಲಾಗಲಿ ರಾಮನಿಗೆ ಎಣೆಯಾದವರು ಯಾರು ಇಲ್ಲ. ಮಾನವರು, ಅಸುರರು ದೇವತೆಗಳಲ್ಲಿರಬಹುದಾದ ಎಲ್ಲಾ ಉತ್ತಮಗುಣಗಳ ಪ್ರತೀಕವಾಗಿದ್ದಾನೆ ರಾಮ. ರಾಮ ಪತ್ನಿಯಾದ ಸೀತೆಯೂ ಸೌಂದರ್ಯಶಾಲಿನಿಯಾಗಿ, ದಯೆ ವಾತ್ಸಲ್ಯ, ಕರುಣೆಗಳ ಪ್ರತೀಕವಾಗಿ ರಾಮಾಯಣದ ಪ್ರಧಾನ ನಾಯಕಿಯಾಗಿದ್ದಾಳೆ. ಸ್ತ್ರೀಯೊಬ್ಬಳಲ್ಲಿ ಮುಖ್ಯವಾಗಿರಬೇಕಾದ ಪತಿವ್ರತಾಧರ್ಮದ ಸಾಕ್ಷಾತ್ಕಾರ ಸೀತೆಯಲ್ಲಾಗಿದೆ ಪುರುಷರಿಗೆ ರಾಮನು ಆದರ್ಶಪ್ರಾಯನಾದ ವ್ಯಕ್ತಿಯಾದಂತೆ ಎಲ್ಲಾ ಉತ್ತಮಗುಣಗಳನ್ನು ಹೊಂದಿದ ಸೀತೆ ಸ್ತ್ರೀಯರಿಗೆ ಆದರ್ಶ ಪ್ರಾಯಳಾಗಿದ್ದಾಳೆ. ಇವೆಲ್ಲವೂ ವಾಲ್ಮೀಕಿಯ ಮೂಲ ಚಿತ್ರವೇ ಆಗಿದ್ದರೂ ಭಾರತೀಯ ದೇಶಭಾಷೆಗಳಲ್ಲಿ – ಉತ್ತರ ಭಾರತದಲ್ಲಿ ತುಲಸೀ ರಾಮಾಯಣದಲ್ಲಿ-ಇವು ಹಾಗೆಯೇ ಉಳಿದಿರುವುದರಿಂದ ಹೆಚ್ಚು ಪಾಲು ಜನರನ್ನು ಮುಟ್ಟುವಲ್ಲಿ ಸಫಲವಾಯಿತು ಎನ್ನಬೇಕು.

ಹಿಂದಿಯ ಪ್ರಸಿದ್ಧ ಕವಿಯಾದ ಕೇಶವದಾಸರು ನೂತನ ದೃಷ್ಟಿಕೋನಗಳಿಂದ ರಾಮಾಯಣವನ್ನು ಅಭ್ಯಸಿಸಿ ರಾಮನ ಕಥೆಯನ್ನು ಕಾವ್ಯಮಯವಾಗಿ ಬರೆದರು. ಕೇಶವದಾಸರ ಕಾವ್ಯವು 'ರಾಮಚಂದ್ರಿಕಾ' ಎಂಬ ಹೆಸರಿನಿಂದ ಪ್ರಸಿದ್ಧವಾದುದಾಗಿದೆ. ಕಬೀರದಾಸರು ತಮ್ಮ ಪದ್ಯಗಳಲ್ಲಿ ರಾಮನ ಉಲ್ಲೇಖವನ್ನು ಮಾಡಿದ್ದರೂ ಸಹ ಕಬೀರರ ರಾಮ ನಿರ್ಗುಣ, ನಿರಾಕಾರನಾದ ರಾಮನಾಗಿದ್ದಾನೆ. ದಶರಥನ ಮಗನಾದ ರಾಮ ತಮ್ಮ ರಾಮನಲ್ಲವೆಂದು ತಮ್ಮ ರಾಮನು ನಿರ್ಗುಣ ನಿರಾಕಾರನಾದ ಬ್ರಹ್ಮನ ಸ್ವರೂಪವೆಂದು ಕಬೀರದಾಸರೇ ಹೇಳಿಕೊಂಡಿದ್ದಾರೆ. (ಇದೇ ಸಂದರ್ಭದಲ್ಲಿ ಕನ್ನಡ ಭಾಷೆಯಲ್ಲಿ ತೊರವೆ ನರಹರಿ ಎಂಬ ಕವಿಯು ಬರೆದ 'ತೊರವೆ ರಾಮಾಯಣ'ವೂ ತಮಿಳುನಾಡಿನ ಸಂತಮಹಾಶಯರಾದ ಕಂಬರು ಬರೆದ 'ಕಂಬರಾಮಾಯಣ'ವೂ ರಾಮಕಥೆಯನ್ನು ಒಳಗೊಂಡಿರುವ ವಿಚಾರವನ್ನು ಪ್ರಸ್ತಾಪಿಸಬಹುದು. ತೆಲುಗು ಭಾಷೆಯಲ್ಲಿ ತ್ಯಾಗರಾಜರು ರಾಮನ ಮೇಲೆ ಅನೇಕ ಕೀರ್ತನೆಗಳನ್ನು ರಚಿಸಿ ಅಮರರಾಗಿದ್ದಾರೆ.) ಅಷ್ಟೇ ಅಲ್ಲದೆ ಇತರ ಭಾರತೀಯ ಭಾಷೆಗಳಲ್ಲಿಯೂ ರಾಮಾಯಣದ ಕಥೆ ನಾನಾರೀತಿಯಾಗಿ ವರ್ಣಿತವಾಗಿರುವುದು ರಾಮಾಯಣದ ಜನಪ್ರಿಯತೆಯನ್ನು ಸಾರುವಲ್ಲಿ ಸಾರ್ಥಕವಾದುದಾಗಿದೆ.

ಈ ಎಲ್ಲಾ ಮಾಹಿತಿಗಳಿಂದಾಗಿ ರಾಮನ ಉಲ್ಲೇಖ ಅನೇಕ ಗ್ರಂಥಗಳಲ್ಲಾಗಿದೆ ಎಂದೂ; ರಾಮಭಕ್ತರು ತಮ್ಮ ಭಕ್ತಿಯನ್ನು ಪ್ರದರ್ಶಿಸಿರುವ ವಿಧಾನವೂ, ರಾಮ ಭಕ್ತಿಯ ಪ್ರಚಾರ ಮಾಡಿದ ವಿಷಯವೂ ಸಹ ಗೊತ್ತಾಗುತ್ತದೆ.

ಉತ್ತರಭಾರತದಲ್ಲಿ ರಾಮಭಕ್ತಿಯನ್ನು ಪ್ರಚಾರಮಾಡಿದ ಕೀರ್ತಿ ಸಂತ ತುಲಸೀದಾಸರಿಗೆ ಸಲ್ಲುತ್ತದೆ ಎಂದರೆ ತಪ್ಪಾಗಲಾರದು. ತುಲಸೀದಾಸರು ರಾಮಾಯಣದ ಕಥೆಯನ್ನು ಕಾವ್ಯಮಯವನ್ನಾಗಿ ಮಾಡಿ 'ರಾಮಚರಿತಮಾನಸ'ವನ್ನು ರಚಿಸಿದ್ದಾರೆ. ರಾಮಚರಿತಮಾನಸ ಆಗಿನ ಸನ್ನಿವೇಶದಲ್ಲಿ ಆ ಪರಿಸರದಲ್ಲಿ, ಸಮಾಜದಲ್ಲಿನ ಜನಗಳ ಮೇಲೆ ಗಾಢವಾದ ಪರಿಣಾಮವನ್ನುಂಟು ಮಾಡಿತು. ರಾಮಾಯಣ ಭಾರತಗಳಂತೆ, ತುಲಸೀದಾಸರ 'ರಾಮಚರಿತಮಾನಸ'ದ ಪಾರಾಯಣವಾಗತೊಡಗಿತು. ಶಿವ – ವಿಷ್ಣು ಎಲ್ಲರೂ ಒಂದೇ ಎಂಬ ಅಭಿಪ್ರಾಯವನ್ನು ತುಲಸೀದಾಸರು ತಮ್ಮ ಕಾವ್ಯದಲ್ಲಿ ಮೂಡಿಸಿದ್ದರಿಂದ ಸಾಮಾಜಿಕ ಐಕ್ಯತೆಯೂ ಆಯಿತು. ನಾನಾಜಾತಿಯ ಜನಗಳು ಏಕತ್ರವಾದರು. ರಾಮನ ಆರಾಧನೆ ಹೆಚ್ಚಿತು. ರಾಮನಲ್ಲಿ ಶ್ರದ್ಧೆ ನಂಬಿಕೆಗಳನ್ನು ಜನ ಹೊಂದಿದರು. ರಾಮನ

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲ–ತಿರುಪತಿ ದೇವಸ್ಥಾನ.

ಸಾಕಾರ, ಸಗುಣ, ಸಾವಯವ ರೂಪವನ್ನು ಚಿತ್ರಿಸಿದ ತುಲಸೀದಾಸರು ರಾಮಭಕ್ತಿಯನ್ನು ತೋರುವಲ್ಲಿ ಅದ್ವಿತೀಯರಾಗಿದ್ದಾರೆ. ತುಲಸೀದಾಸರ ಅಗಾಧವಾದ ಪಾಂಡಿತ್ಯ, ಪ್ರತಿಭೆಗಳು ರಾಮಚರಿತಮಾನಸದಲ್ಲಿ ಚೆನ್ನಾಗಿ ವ್ಯಕ್ತಗೊಂಡಿವೆ.

'ಅವಧಿ' ಭಾಷೆಯಲ್ಲಿ ರಾಮಚರಿತಮಾನಸವನ್ನು ರಚಿಸಿದ ತುಲಸೀದಾಸರು ಜನಗಳ ಹೃನ್ಮನಗಳ ಮುಂದೆ ಭಗವಾನ್ ರಾಮಚಂದ್ರನ ಪಾತ್ರ ಕಾಲಕ್ಕೂ ನಿಲ್ಲುವಂತೆ ಸೊಗಸಾಗಿ ರಾಮನನ್ನು ಭಜಿಸಿ ಆ ಪಾತ್ರ ಆದರ್ಶ ಪಾತ್ರವಾಗುವಂತೆ ಮಾಡಿದ್ದಾರೆ. ರಾಮಚರಿತ ಮಾನಸವನ್ನು ರಚಿಸುವ ಹಿನ್ನಲೆಯಲ್ಲಿ ಅದೆಂತಹ ಭವ್ಯವಾದ ಚೇತನವಿದ್ದಿತು ? ಆ ಮಹಾಚೇತನದ ಜ್ಞಾನವಾದರೂ ಅದ್ಭುತವಾದುದೇ ಸರಿ. ಆ ಮಹಾಚೇತನರೂಪಿಗಳಾದ ತುಲಸೀದಾಸರು ಅನೇಕ ಗ್ರಂಥಗಳನ್ನು ಓದಿ ಅದರ ಸಾರವೆಲ್ಲವನ್ನೂ ಅರಗಿಸಿಕೊಂಡು ನಂತರ ರಾಮಚರಿತ ಮಾನಸವನ್ನು ರಚಿಸಿದ್ದಿರಬಹುದು. ಪುರಾಣ, ಆಗಮ ಮೊದಲಾದವುಗಳ ವಿಚಾರವೆಲ್ಲವನ್ನೂ ತಿಳಿದು ಕೊಂಡಿದ್ದ ತುಲಸೀದಾಸರು 'ರಾಮ ಚರಿತ ಮಾನಸ'ದ ಪದ್ಯವೊಂದರಲ್ಲಿ ಸ್ಪಷ್ಟವಾಗಿಯೇ ಈ ವಿಷಯವನ್ನು ಹೇಳಿಕೊಂಡಿದ್ದಾರೆ.

"ನಾನಾ ಪುರಾಣನಿಗಮಾಗಮ ಸಮ್ಮತಂ ಯತಾರಾಮಾಯಣೇ ನಿಗದಿತಂ ಕದಚಿತ್ ಅನ್ಯತೋಪಿ ಸ್ವಾಂತಃ ಸುಖಾಯ ತುಲಸೀ ರಘುನಾಥ ಗಾಥಾ ಭಾಷಾ ನಿಬಂಧಮತಿ ಮಂಜುಲಮ್ ಆತನೋತಿ॥"

–ತುಲಸೀದಾಸರು ಕಾವ್ಯವನ್ನು ಧಾರ್ಮಿಕ ಜಾಗೃತಿಯಾಗಲೆಂದು ರಚಿಸಿದರೆಂದರೆ ತಪ್ಪಾಗಲಾರದು. ಧರ್ಮದ ರಸಾಭಿವ್ಯಕ್ತಿಯ ಜೊತೆ ಜೊತೆಗೇ ರಾಮಚರಿತ ಮಾನಸದಲ್ಲಿ ಭಕ್ತಿಯ ಆವೇಶವೂ ಒಡಮೂಡಿ ಬಂದಿದೆ. ತುಳಸೀದಾಸರ ಕಾವ್ಯದಲ್ಲಿ–ಒಂದು ಕಾವ್ಯದಲ್ಲಿರಬೇಕಾದ ಭಾವಪಕ್ಷ ಕಲಾಪಕ್ಷಗಳ ಸಂಗಮವೂ ಆಗಿರುವುದನ್ನು ಗಮನಿಸಬಹುದು. ರಸ, ಭಾವ, ಅಲಂಕಾರ, ಸಾಹಿತ್ಯಪ್ರಜ್ಞೆ, ಎಲ್ಲವೂ – ಎಲ್ಲವೂ 'ರಾಮಚರಿತ ಮಾನಸ'ದಲ್ಲಿದೆ. ಮಧ್ಯಕಾಲೀನ ಭಾರತದಲ್ಲಿ ಲೋಕನಾಯಕರ ಸ್ಥಾನವನ್ನು ತುಲಸೀದಾಸರೇ ಪಡೆದು ಕೊಂಡರೆನ್ನಬಹುದು. ಲೋಕನಾಯಕರ ಪಟ್ಟ ಪಡೆಯುವುದು ಅಷ್ಟು ಸುಲಭವಾದುದೇನೂ ಅಲ್ಲ. ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಹಿತ್ಯಕವಾಗಿ, ಹೀಗೆ ಎಲ್ಲಾ ತರಹದಲ್ಲಿಯೂ ಜನಗಳಲ್ಲಿ ಆತ್ಮಬೋಧೆ ಎಚ್ಚರಗೊಳ್ಳುವಂತೆ ಮಾಡಬಲ್ಲ ಭಾವವನ್ನು ಹೊಂದಿದವರೇ ಲೋಕನಾಯಕರಾಗಬಲ್ಲರು.



ಅಂತಹ ಧೃಢ ಸಂಕಲ್ಪವನ್ನು ಹೊಂದಿದ್ದುದು ಮಾತ್ರವಲ್ಲ, ಧರ್ಮವೇ ನಶಿಸಿ ಹೋಗುತ್ತಿದ್ದಂತಹ ಕಾಲದಲ್ಲಿ ತುಲಸೀದಾಸರು ತಮ್ಮ ಪ್ರಯತ್ನದಿಂದಲೇ ಜನಗಳಲ್ಲಿ ದೇವರ ಬಗೆಗೆ ನಂಬಿಕೆಯುಂಟಾಗುವಂತೆ ಮಾಡಿ ಧರ್ಮವನ್ನು ಉದ್ಧರಿಸುವಲ್ಲಿ ಸಫಲರಾದರು. ತುಲಸೀದಾಸರ 'ರಾಮ ಚರಿತ ಮಾನಸ'ದಲ್ಲಿ ರಾಮ, ಸೀತೆ, ಕೌಸಲ್ಯೆ, ರಾವಣ, ಕೈಕೇಯಿ ಮೊದಲಾದ ಪಾತ್ರಗಳೆಲ್ಲವೂ ಸುಂದರವಾಗಿ ಮೂಡಿ ಬಂದಿವೆ. ಜನಗಳಿಗೆ ಅರ್ಥವಾಗುವಂತೆ ರಾಮಾಯಣದ ಕಥೆಯನ್ನು ಸುಲಭವಾಗಿ ಮತ್ತು ಕಾವ್ಯಮಯವಾಗಿ ರಚಿಸಿದ ತುಲಸೀದಾಸರಿಗೆ ಹಿಂದೀ ಸಾಹಿತ್ಯಚರಿತ್ರೆಯಲ್ಲಿಯೂ, ಭಾರತದ ಧಾರ್ಮಿಕ ಇತಿಹಾಸದಲ್ಲಿಯೂ ಪ್ರಮುಖವಾದ ಸ್ಥಾನ ದೊರೆತಿದೆ. ರಾಮಭಕ್ತಿ ಶಾಖೆಯ ಸಂತ ಭಕ್ತರಂತೆಯೇ ಕೃಷ್ಣ ಭಕ್ತಿ ಶಾಖೆಯ ಭಕ್ತರೂ ತಮ್ಮ ಭಜನೆಗಳ ಮೂಲಕ ಜನಗಳಲ್ಲಿ ಭಗವಂತನ ಬಗೆಗೆ ಆಸಕ್ತಿ–ಭಕ್ತಿಗಳುಂಟಾಗುವಂತೆ ಮಾಡಿದರೆನ್ನಬಹುದು. ಕೃಷ್ಣ ಭಕ್ತಿ ದಕ್ಷಿಣಭಾರತ ಮತ್ತು ಉತ್ತರಭಾರತಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಹಾಗೆ ನೋಡಿದರೆ ದಕ್ಷಿಣ ಭಾರತಕ್ಕಿಂತಲೂ ಉತ್ತರಭಾರತದಲ್ಲಿ ಕೃಷ್ಣ ಭಕ್ತಿಯ ಪ್ರಚಾರ ಸಾಕಷ್ಟು ನಡೆದಿರುವುದನ್ನು ಗುರುತಿಸಬಹುದು.

ಮಹಾತ್ಮ ವಲ್ಲಭಾಚಾರ್ಯರಿಂದ ಮೂಡಿ ಬಂದ ಪುಷ್ಟಿಮಾರ್ಗವು ಕೃಷ್ಣ ಭಕ್ತಿಯ ಪ್ರಚಾರಕ್ಕೆ ಮೂಲ ಕಾರಣವಾಯಿತು. ಉತ್ತರಭಾರತದಲ್ಲಿ ಕೃಷ್ಣಭಕ್ತಿಯ ಪ್ರಚಾರ ಸಾಕಷ್ಟು ನಡೆದು ಕೃಷ್ಣನ ಬಗೆಗೆ ಅದ್ಭುತವಾದ ಕಾವ್ಯಗಳು ಬಂದಿರುವುದೂ ಗಮನಾರ್ಹವಾದ ಅಂಶವಾಗಿದೆ. ಶ್ರೀ ಕೃಷ್ಣನಿಗೆ ತಮ್ಮ ತನು ಮನ ಧನಗಳೆಲ್ಲವನ್ನೂ ಅರ್ಪಿಸಿ ತಮ್ಮ ಭಕ್ತಿಯ ಪರಾಕಾಷ್ಠತೆಯನ್ನು ತೋರಿದ ಸಂತರು ಭಕ್ತರು, ಅಪಾರವಾಗಿದ್ದಾರೆ.

ಕೃಷ್ಣ ಭಕ್ತಿಯನ್ನು ತಮ್ಮ ಕಾವ್ಯಗಳಲ್ಲಿ ಸೊಗಸಾಗಿ ತೋರ್ಪಡಿಸಿರುವ ಅನೇಕ ಕವಿರೂಪದ ಸಂತರೂ ಇದ್ದಾರೆ. ಮಹಾತ್ಮ ಸೂರದಾಸರು ತಮ್ಮ ಅನೇಕ ಪದ್ಯಗಳಲ್ಲಿ ಶ್ರೀಕೃಷ್ಣನ ಬಾಲಲೀಲೆ ಭ್ರಮರಗೀತೆಯ ಪ್ರಸಂಗ ಮೊದಲಾದುವುಗಳನ್ನು ವರ್ಣಿಸಿದ್ದಾರೆ. 'ಸೂರಸಾಗರ' ಎಂಬ ಪುಸ್ತಕದಲ್ಲಿ ಸೂರದಾಸರು ರಚಿಸಿದ ಪದಗಳನ್ನು ಸಂಗ್ರಹಿಸಲಾಗಿದೆ. ಯಶೋದೆ, ರಾಧೆಯರ ಪಾತ್ರಗಳಲ್ಲಿ ತಾನೇ ಆ ಪಾತ್ರಗಳನ್ನು ಆರೋಪಿಸಿಕೊಂಡು ತನ್ಮಯತೆಯಿಂದ, ಭಕ್ತಿವಶದಿಂದ, ಬಹುಪರವಶತೆಯಿಂದ ಸೂರದಾಸರು ಕೃಷ್ಣನನ್ನು ಕೊಂಡಾಡಿರುವುದು ಮನಮೋಹಕವಾಗಿದೆ. ಅತ್ಯಾಕರ್ಷಕವಾಗಿದೆ. ಸೂರದಾಸರ 'ಸೂರಸಾಗರಕ್ಕೆ' ಆಧಾರ ಭಾಗವತದ ದಶಮಸ್ಕಂಧದ ಕಥೆಯೇ ಎನ್ನಬಹುದು. ಒಟ್ಟಾರೆಯಾಗಿ ಹೇಳುವುದಾದರೆ ಸೂರದಾಸರ ಭಕ್ತಿ ತನ್ಮಯತೆ ಅವರ ಪದ್ಯಗಳಲ್ಲಾಗಿರುವುದನ್ನು ನೋಡಬಹುದು. ವ್ರಜಭಾಷೆಯಲ್ಲಿ ರಚಿತಗೊಂಡ ಸೂರದಾಸರ ಪದ್ಯಗಳ ಸೌಂದರ್ಯ ಸಗುಣನಾದ ಕೃಷ್ಣ ಪಾತ್ರದ ಚಿತ್ರಣ, ಓದುಗರ ಮನಮುಟ್ಟುತ್ತವೆ. ರಾಮಭಕ್ತಿಗಿಂತಲೂ ಜನಗಳಲ್ಲಿ ಕೃಷ್ಣಭಕ್ತಿಯ ಪ್ರಚಾರ ಹೆಚ್ಚಾಗಲು ಸೂರದಾಸರ ಪದ್ಯಗಳೂ ಕೆಲಮಟ್ಟಿಗೆ ಕಾರಣವೆನ್ನಬಹುದು. ಉದ್ಧವ ಗೋಪಿಯರ ಸಂವಾದದಲ್ಲಿ ಸೂರದಾಸರು ಸಗುಣಧರ್ಮದ ಮೂಲಕ ನಿರ್ಗುಣಧರ್ಮವನ್ನು ಖಂಡಿಸುವಲ್ಲಿ ಸಫಲರಾಗಿದ್ದಾರೆ. ಸೂರದಾಸರಿಗಿಂತಲೂ ಹಿಂದೆ ಜಯದೇವ ಕವಿ ರಾಧಾ – ಕೃಷ್ಣರ ಬಗೆಗೆ ಗೀತೆ ಗೋವಿಂದವನ್ನು ರಚಿಸಿದ್ದ. ಗೀತಗೋವಿಂದದ ಪದ್ಯಗಳು ಸಂಸ್ಕೃತ ಭಾಷೆಯಲ್ಲಿವೆ. ಗೀತಗೋವಿಂದದ ಪದ್ಯಗಳು ನಿತಾಂತ ಸುಂದರವಾಗಿವೆ. ಜಯದೇವನ ಅಷ್ಟಪದಿಗಳು ಇಂದಿಗೂ ತಮ್ಮ ಸೊಗಸನ್ನು ಕಳೆದುಕೊಂಡಿಲ್ಲ. ಗೀತ ಗೋವಿಂದದ ಕಥಾವಸ್ತುವಿಗೆ ಮೂಲವಾದುದು ಎಂದರೆ ಭಾಗವತವೇ.

ಜಯದೇವನ ಮಾರ್ಗವನ್ನೇ ಅನುಸರಿಸಿ ಮಿಥಿಲೆಯ ಕೋಗಿಲೆಯೆಂದು ಹೆಸರುವಾಸಿಯಾದ ವಿದ್ಯಾಪತಿ ರಾಧಾ ಕೃಷ್ಣರ ಬಗೆಗೆ ಅನೇಕ ಪದ್ಯಗಳನ್ನು ಬರೆದ. 'ವಿದ್ಯಾಪತಿ ಕೆ ಪದಾವಲಿ' ಎಂಬ ಪುಸ್ತಕದಲ್ಲಿ ವಿದ್ಯಾಪತಿಯ ಪದಗಳು ಸಂಗ್ರಹಿತವಾಗಿವೆ. ಗೀತಗೋವಿಂದದ ಪ್ರಭಾವ ವಿದ್ಯಾಪತಿಯ ಮೇಲಾಗಿದೆ. ಕೃಷ್ಣನ ಪ್ರೇಯಸಿಯಾದ ರಾಧೆಯ ಉಲ್ಲೇಖ ಗೋಪಾಲ ತಾಪನೀ ಉಪನಿಷದ್‌ನಲ್ಲಿ ದೊರೆಯುತ್ತದೆ. ವಿದ್ಯಾಪತಿ ರಾಧಾ – ಕೃಷ್ಣರ ಐಕ್ಯವನ್ನು ತನ್ನ ಪದ್ಯಗಳಲ್ಲಿ ನಿರೂಪಿಸಿರುವುದು ಮೋಹಕವಾಗಿದೆ. ವಿದ್ಯಾಪತಿಯ ಸಂಭೋಗ ಶೃಂಗಾರದ ವರ್ಣನೆಗಿಂತಲೂ ವಿಪ್ರಲಂಭ ಶೃಂಗಾರದ ವರ್ಣನೆಯ ಪದ್ಯಗಳು ಸೊಗಸಾಗಿವೆ. ರಾಧೆಯ ನಖ – ಶಿಖದ ವರ್ಣನೆ, ಸಂಭೋಗ ವಿಯೋಗಗಳಲ್ಲಿನ ರಾಧೆಯ ಪರಿಸ್ಥಿತಿ ಅಭಿಸಾರಿಕೆ ಎಲ್ಲವೂ ವಿದ್ಯಾಪತಿಯಲ್ಲಿ ಸಿಕ್ಕು

ತ್ತನೆ. ವಿದ್ಯಾಪತಿ ಎಲ್ಲಾ ಋತುಗಳ ವರ್ಣನೆಯನ್ನು ಮಾಡಿರುವ ಸೌಂದರ್ಯಾರಾಧಕ ಕವಿಯಾಗಿದ್ದಾನೆ. ವಿದ್ಯಾಪತಿಯ ತನ್ಮಯತೆ, ಕಾವ್ಯಮಾಧುರ್ಯ ಪದಗಳಲ್ಲಿ ಮಂಜುಳ ಧ್ವನಿಯನ್ನುಂಟು ಮಾಡುವ ವಿಧಾನ ಅದ್ಭುತವಾದುದಾಗಿದೆ.

ಜ್ಞಾನ ಗಂಗೋತ್ರಿಯ ಸಂಪುಟವೊಂದರಲ್ಲಿ ಗ್ರಿಯರ್ಸನ್‌ನು ವಿದ್ಯಾಪತಿಯ ಬಗೆಗೆ ತನ್ನ ಪುಸ್ತಕ "ವಿದ್ಯಾಪತಿ ಅಂಡ್ ಹಿಸ್ ಕಂಟೆಂಪೊರರೀಸ್" ನಲ್ಲಿ ಹೇಳಿರುವುದನ್ನು ಸಂಗ್ರಹಿಸಲಾಗಿದೆ. ಅದನ್ನು ಇಲ್ಲಿ ಕೊಡುವುದು ತಪ್ಪಾಗಲಾರದು. "ಭವರೋಗದ ಔಷಧಿಯಾದ ಕೃಷ್ಣನ ಸ್ತುತಿಗಳು ಕಣ್ಮರೆಯಾಗಬಹುದು. ಆದರೆ ರಾಧಾ – ಕೃಷ್ಣರ ಲೀಲಾಗಾನವಿರುವ ವಿದ್ಯಾಪತಿಯ ಪದಗಳು ಮಾತ್ರ ಎಂದೆಂದಿಗೂ ಅಳಿಯವು." ಇವು ಕಾಲಕ್ಕೂ ನಿಜವಾಗಬಲ್ಲ ನುಡಿಗಳು. ವಿದ್ಯಾಪತಿಯ ಪದ್ಯಗಳ ಪ್ರಭಾವ ಜನಗಳ ಮೇಲೆ ಗಾಢವಾದ ಪರಿಣಾಮವನ್ನು ಬೀರಿ ಅವರಲ್ಲಿ ಕೃಷ್ಣನ ಪರವಾಗಿ ಭಕ್ತಿಯುಂಟಾಗುವಂತೆ ಮಾಡಿತು.

ಚೈತನ್ಯರು ವಿದ್ಯಾಪತಿಯ ಪದ್ಯಗಳನ್ನೋದಿ ಆನಂದಹೊಂದಿ ಭಾವಾವೇಶದಿಂದ ಮೂರ್ಛಿತರಾಗುತ್ತಿದ್ದರಂತೆ. ವಿದ್ಯಾಪತಿಯ ತನ್ಮಯತೆ ಮೆಚ್ಚುವಂತಹುದು. ರಾಧಾಕೃಷ್ಣರ ಲೀಲೆಗಳನ್ನು ಮನಮುಟ್ಟುವಂತೆ ವರ್ಣಿಸಿರುವ ಕವಿ ವಿದ್ಯಾಪತಿ ಹಿಂದೀ ಸಾಹಿತ್ಯದಲ್ಲಿ ಅಮರನಾಗಿದ್ದಾನೆ.

ವಿಷ್ಣುಸ್ವಾಮಿ ಮತ್ತು ನಿಂಬಾರ್ಕಾಚಾರ್ಯರು ರಾಧೆಯನ್ನು ಕೃಷ್ಣನೊಡನೆ ಸಮಾವೇಶ ಮಾಡಿ ಇದಕ್ಕು ಮೊದಲು ಕೃಷ್ಣಭಕ್ತಿಯ ಪ್ರಚಾರಮಾಡಿದ್ದರು. ಭಕ್ತಿಮಾರ್ಗದಲ್ಲಿ ಪ್ರಸಿದ್ಧರಾದ – ಅದರಲ್ಲಿಯೂ ಕೃಷ್ಣಭಕ್ತಿಯನ್ನು ಜನರಲ್ಲಿ ಪಸರಿಸುವ ಕಾರ್ಯವನ್ನು ಮಾಡಿದವರು ವಲ್ಲಭಾಚಾರ್ಯರು. ವಲ್ಲಭಾಚಾರ್ಯ ಮತ್ತು ಚೈತನ್ಯ ಇವರಿಬ್ಬರೂ ರಾಧೆಯ ಉಪಾಸನೆಯನ್ನೇ ಆರಂಭಿಸಿದರಂತೆ. ಇವರ ನಂತರ ಕೃಷ್ಣದಾಸ, ನಂದದಾಸ, ಕುಂಭನದಾಸ, ಚತುರ್ಭುಜದಾಸ, ಪರಮಾನಂದದಾಸ, ಗೋವಿಂದಸ್ವಾಮಿ, ಚೀತಾಸ್ವಾಮಿ, ಮಹಾಭಕ್ತೆ ಮೀರಾಬಾಯಿ, ಬಿಹಾರಿಲಾಲ್, ಘನಾನಂದ್ ರಸಖಾನ್. ಮೊದಲಾದ ಭಕ್ತಭಕ್ತೆಯರು ಕೃಷ್ಣನಲ್ಲೇ ತಮ್ಮ ಸರ್ವಸ್ವವನ್ನೂ ಅರ್ಪಿಸಿ ಕೃಷ್ಣನಲ್ಲೇ ಮುಕ್ತಿಯನ್ನು ಕಂಡುಕೊಂಡವರು. ಇವರಲ್ಲದೆ ಇನ್ನೂ ಅನೇಕ ಭಕ್ತಭಕ್ತೆಯರಿಂದ ಆ ಕಾಲದಲ್ಲಿ ಕೃಷ್ಣಭಕ್ತಿಯು ಪ್ರಚಾರ ಪಡೆದು ಹರಡಲಾರಂಭಿಸಿತು.

ಭಗವದ್‌ರತಿಯ ಆಧಿಕ್ಯ, ಐಹಿಕದ ಬಗೆಗೆ ಉದಾಸೀನ ಮೊದಲಾದ ಅಂಶಗಳೇ ಈ ಭಕ್ತಭಕ್ತೆಯರಿಗೆ ಕೃಷ್ಣಭಕ್ತಿಯನ್ನುಂಟು ಮಾಡುವಲ್ಲಿ ನೆರವಾದವೆನ್ನಬಹುದು. ಶ್ರೀಕೃಷ್ಣನ ಬಾಲಲೀಲೆಗಳನ್ನೂ, ರಾಸಲೀಲೆಗಳನ್ನೂ ಇವರುಗಳು ಭಾವಪರವಶರಾಗಿ ವರ್ಣಿಸಿದಷ್ಟು, ಸೊಗಸಾಗಿ ನಿರೂಪಿಸಿದಷ್ಟು, ಮತ್ತಾರೂ ನಿರೂಪಿಸಲೇ ಇಲ್ಲ. ದಕ್ಷಿಣದಲ್ಲಿ ಆಳ್ವಾರರು ಕೃಷ್ಣಭಕ್ತಿಯ ಆರಾಧಕರಾಗಿದ್ದರು. ಶೂಡಿಕೊಡುತ್ತ ನಾಚ್ಚಿಯಾರ್ ಅಥವಾ ಆಂಡಾಳ್ ಭಕ್ತೆಯಾದ ಮೀರಾಬಾಯಿಯಂತೆಯೇ ಕೃಷ್ಣನಲ್ಲಿ ಅಪಾರವಾದ ಪ್ರೇಮವನ್ನು ಹೊಂದಿದವಳಾಗಿದ್ದಳು. ಕರ್ನಾಟಕದ ಕವಿಯಾದ ರುದ್ರಭಟ್ಟನ 'ಜಗನ್ನಾಥವಿಜಯ'ವೂ ಕೃಷ್ಣನ ಕಥೆಯನ್ನೇ ಒಳಗೊಂಡಿದೆ. ಒಟ್ಟಾರೆಯಾಗಿ ಹೇಳುವುದಾದರೆ ಇಡೀ ಭಾರತದಲ್ಲಿಯೇ ಕೃಷ್ಣನ ಆರಾಧನೆ ಹೆಚ್ಚಾಗಿ ಕೃಷ್ಣಭಕ್ತಿಯ ಪ್ರಚಾರ ಸಾಕಷ್ಟು ನಡೆದಿದ್ದಿತು. ಕೃಷ್ಣನನ್ನು ಕುರಿತಂತೆ ಬರೆದ ಸಾಹಿತ್ಯ ರಾಶಿರಾಶಿಯಾಗಿದೆ. ಭಾಗವತ–ಮಹಾಭಾರತಗಳಲ್ಲಿ ಕೃಷ್ಣನ ಉಲ್ಲೇಖವಿದೆ. ಕೃಷ್ಣನ ಚರಿತ್ರೆ ಕಾಲಕ್ಕು ಮಹತ್ವ ಪೂರ್ಣವಾದ ಸ್ಥಾನವನ್ನು ಪಡೆದುಕೊಂಡಿದೆ.

ಹೀಗೆ ಉತ್ತರಭಾರತದಲ್ಲಿ ಧರ್ಮ ನಶಿಸಿ ಹೋಗದಂತೆ, ದೇವರಲ್ಲಿ ನಂಬಿಕೆ ಅಳಿಯದಂತೆ, ಜನಗಳಲ್ಲಿ ಭಕ್ತಿ ಹೆಚ್ಚುವಂತೆ ಮಾಡಿದ ಶ್ರೇಯಸ್ಸು ರಾಮಭಕ್ತಿ, ಕೃಷ್ಣಭಕ್ತಿ ಶಾಖೆಗಳ ಅನೇಕ ಸಂತರು – ಭಕ್ತರದು ಎಂದು ಹೇಳಬಹುದು. ರಾಮನ ಆರಾಧನೆ, ಕೃಷ್ಣನ ಆರಾಧನೆ ಜನಗಳಲ್ಲಿ ಹೀಗೆ ಪ್ರಚಲಿತದಲ್ಲಿ ಬಂದಿತು. ರಾಮಭಕ್ತಿ, ಕೃಷ್ಣಭಕ್ತಿಗಳನ್ನು ಹೊಂದಿದ ಜನರು ವಿಲಾಸಭೋಗಗಳಿಂದ ಎಚ್ಚೆತ್ತು ಹಿಂದೂಧರ್ಮವನ್ನು ಕಾಪಾಡಿಕೊಂಡು ಬರುವ ಮಹತ್ವಪೂರ್ಣವಾದ ಕಾರ್ಯದಲ್ಲಿ ಭಾಗಿಗಳಾದರು. ಈ ರೀತಿಯ ಧರ್ಮರಕ್ಷಣೆ ಮಾಡುವಲ್ಲಿ ಮುಂದೆ ಅವರು ಸಫಲರಾದರು. ಉತ್ತರಭಾರತದಲ್ಲಿ ಧಾರ್ಮಿಕ ಜಾಗೃತಿಯುಂಟಾಗಿ ಜನಗಳು ಭಕ್ತರಾಗಿ ಮಾರ್ಪಟ್ಟ ಈ ಪರಿವರ್ತನೆಯ ಘಟ್ಟ ಉತ್ತರ ಭಾರತೀಯ ಧಾರ್ಮಿಕ ಚರಿತ್ರೆಯಲ್ಲಿಯೂ, ಸಾಮಾಜಿಕ ಜೀವನದಲ್ಲಿಯೂ, ಸಾಹಿತ್ಯಿಕ ಇತಿಹಾಸದಲ್ಲಿಯೂ ಎಂದಿಗೂ ಮರೆಯಲಾಗದಂತಹ ಅವಿಸ್ಮರಣೀಯವಾದ ಘಟ್ಟವಾಗಿದೆ ಎಂದು ಹೇಳುವುದು ಹೆಚ್ಚು ಸಮಂಜಸಪೂರ್ಣವಾದ ವಿಚಾರವಾಗುತ್ತದೆ.

---

## ಹರಿದಾಸವಾಣಿ

ಕಷ್ಟವೆಂಬುದನ್ನು ಎಳ್ಳಷ್ಟೂ ಇಷ್ಟಪಡದೆ ಅಷ್ಟೈಶ್ವರ್ಯ ಸುಖಗಳು ಅಷ್ಟು ಇಷ್ಟು ಸಾಲದೆ ಎಷ್ಟಿದ್ದರೂ ಇನ್ನೂ ಬೇಕೆಂದು ಇಷ್ಟಪಡುವ ಶಿಷ್ಟ – ದುಷ್ಟ ಭೇದವಿಲ್ಲದ ಈ ವಿಶಿಷ್ಟ ಬಯಕೆ ಎಲ್ಲ ಮನುಷ್ಯ ಜೀವಿಗಳದ್ದು. ಆದರೆ ದುಃಖ ನಿವೃತ್ತಿಯೊಂದಿಗೆಸುಖ ಪ್ರಾಪ್ತಿಯ ಮಾರ್ಗವನ್ನು ತಿಳಿಯುವ ಹಾಗೂ ಅನುಸರಿಸುವ ಪ್ರವೃತ್ತಿ ಈ ಜನರಲ್ಲಿ ವಿರಳ. ಇವನ್ನೇ ಮಹಾಭಾರತ

" ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ
ನೇಚ್ಛಂತಿ ಮಾನವಾಃ |
ನ ಪಾಪಫಲ ಮಿಚ್ಛಂತಿ
ಪಾಪಂ ಕುರ್ವಂತಿ ಯತ್ನತಃ || "

ಎಂದು ಉದ್ಗರಿಸಿದೆ.

ಭಗವಂತನ ಜ್ಞಾನ ಪಡೆಯಲು ವ್ಯಾಸ ಸಾಹಿತ್ಯದ ಅಧ್ಯಯನ ಮರು - ಮರೀಚಿಕೆಯೆನಿಸಬಹುದಾದ ಶ್ರೀಸಾಮಾನ್ಯನಿಗೆ ದಾಸ ಸಾಹಿತ್ಯವು ವರದಾನವಾಗಿದೆ. ಶ್ರೀ ಸಾಮಾನ್ಯನಿಗೆ ಕಬ್ಬಿಣದ ಕಡಲೆಯಂತಿರುವ ಬ್ರಹ್ಮ ಸೂತ್ರ, ಮಹಾಭಾರತ ಮುಂತಾದ ವ್ಯಾಸಸಾಹಿತ್ಯವನ್ನು ಸುಲಿದ ಬಾಳೇಹಣ್ಣಿನಂತೆ ಸುಲಭವಾಗಿ ದಾಸ ಸಾಹಿತ್ಯದ ಮೂಲಕ ಜನಸಾಮಾನ್ಯರಿಗೆ ತಲುಪಿಸಿದವರಲ್ಲಿ ಪುರಂದರದಾಸರು ಅಗ್ರಪೂಜೆಗೆ ಅರ್ಹರಾಗಿದ್ದಾರೆ. ದಾಸ ಸಾಹಿತ್ಯೇತಿಹಾಸದಲ್ಲಿ ಅತ್ಯಂತ ಜನಪ್ರಿಯರಾಗಿ ಸುಪ್ರಸಿದ್ಧರಾಗಲು ಇದೂ ಒಂದು ಪ್ರಮುಖ ಕಾರಣ. ವೇದ - ಉಪನಿಷತ್ತುಗಳ, ಭಾಗವತ – ಭಾರತಗಳ, ಪುರಾಣ - ರಾಮಾಯಣಗಳ ಸಾರ ಸಂಗ್ರಹವನ್ನು ಪುರಂದರದಾಸರ ಪದಗಳು, ಸುಳಾದಿಗಳು, ಉಗಾಭೋಗಗಳು, ಬುಡು ಬುಡಿಕೆ ಪದಗಳು ಮುಂತಾದ ಕೃತಿಗಳಲ್ಲಿ ಕಾಣಬಹುದು. ಒಂದು ಬುಡು ಬುಡಿಕೆ ಪದವನ್ನು ಇಲ್ಲಿ ಪರಿಚಯಿಸಲಾಗಿದೆ.

**ಶ್ರೀ ಆರ್. ಗುರುರಾಜ ಗುಡಿ**

ಹಳೇ ವಸ್ತ್ರವ ಬಿಸಾಡಣ್ಣಾ |
ಹೊಸಾ ವಸ್ತ್ರವ ದೇವ್ರು ಕೊಟ್ಟಾನು |
ಹಕ್ಕಿಯು ಅರಸ ಆಡಿದ ಮಾತು |
ಉತ್ತಮ ಮಾರ್ಗವ ಹಿಡಿಯೋ ತಮ್ಮ||
|| ೧ ||

ಜೀವನು ಅಮರನಾದುದರಿಂದ ಸಾವು ನೋವುಗಳು ಶರೀರಕ್ಕೆ ವಿನಹ ಜೀವನಿಗಲ್ಲ. ಆದರೂ ಈ ಶರೀರ ನಶ್ವರವಾದುದರಿಂದ ಶರೀರದ ಬಗ್ಗೆಯೂ ಅಭಿಮಾನ ಬೇಡ. ಈ ಹಳೇ ಶರೀರ ನಾಶವಾದರೂ ಮತ್ತೊಂದು ಹೊಸ ಶರೀರ ಬರುವುದರಿಂದ ಶರೀರನಾಶಕ್ಕಾಗಿಯೂ ದುಃಖ ಅನುಚಿತ. ಮನುಷ್ಯರು ಹಳೇ ಬಟ್ಟೆಗಳನ್ನು ಬಿಟ್ಟು ಹೊಸಾ ಬಟ್ಟೆಗಳನ್ನು ಅಮಿತೋತ್ಸಾಹ ಹಾಗೂ ಸಂತೋಷದಿಂದ ಧರಿಸಲು ಇಷ್ಟಪಡುವಂತೆ ನಿತ್ಯ ಸೇವೆಗಾಗಿ ಸವೆಸಿ ನಶ್ವರವಾದ ದೇಹದ ಅಭಿಮಾನ ತೊರೆದು ಈಶ್ವರನ ಮೇಲೆ ವಿಶ್ವಾಸ ವಿಟ್ಟದ್ದೇ ಆದರೆ ' ಹೊಸಾ ವಸ್ತ್ರವ ದೇವರು ಕೊಟ್ಟಾನು. ' ದೇವರನ್ನು ವಿಶ್ವಾಸದಿಂದ ಭಜಿಸಬೇಕು. ಸಂಶಯವು ಅಧಃಪತನಕ್ಕೆ ಕಾರಣವಾಗುವುದೆಂದು " ಸಂಶಯಾತ್ಮಾ ವಿನಶ್ಯತಿ " ಎಂದು ಗೀತೆಯಲ್ಲಿ ಹೇಳಲಾಗಿದೆ. ಪುನರ್ಜನ್ಮದಲ್ಲಿ ಸಾಧನಾನುಕೂಲವಾದ ಉತ್ತಮ ಹಾಗೂ ದುರ್ಲಭವಾದ ಮನುಷ್ಯ ಜನ್ಮವನ್ನು ದೇವರು ಕೊಡುವನು. ವಿಶ್ವಾಸ, ಭಕ್ತಿ, ಶ್ರದ್ಧೆಗಳಿಂದ ದೇವರನ್ನು ಭಜಿಸಿದರೆ ಮಾತ್ರ ' ಹೊಸಾ ವಸ್ತ್ರವ ದೇವರು ಕೊಟ್ಟಾನು ' ಇಲ್ಲದಿದ್ದರೆ ಅಧಃಪತನವು ನಿಶ್ಚಿತ ಎಂಬುದು ದಾಸರ ಇಂಗಿತ.

**ಪುರಂದರದಾಸರ**



# ಬುಡುಬುಡಿಕೆ ಪದ

ವಾದ ಜೀವ ಕರ್ಮಭೋಗದಿಂಗ ಜೀರ್ಣವಾದ ದೇಹ ಬಿಟ್ಟು ಹೊಸ ದೇಹವನ್ನು ಪಡೆಯುತ್ತಾನೆ. ಈ ವಿಷಯವನ್ನು ;

" ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ |
ತಥಾ ಶರೀರಾಣಿ ವಿಹಾಯ ಜೀರ್ಣಾನಿ
ಅನ್ಯಾನಿ ಸಂಯಾತಿ ನವಾನಿ ದೇಹೀ || "

ಎಂಬ ಭಗವದ್ಗೀತೆಯ ೨ನೇ ಅಧ್ಯಾಯದ ೨೨ನೇ ಶ್ಲೋಕದಲ್ಲಿ ಹೇಳಲಾಗಿದೆ. ಇದನ್ನೇ ದಾಸರು;

" ಹಳೇ ವಸ್ತ್ರವ ಬಿಸಾಡಣ್ಣಾ |
ಹೊಸಾ ವಸ್ತ್ರವ ದೇವರು ಕೊಟ್ಟಾನು||"

ಎಂದು ಹೇಳಿದ್ದಾರೆ. ನರಹರಿಯನ್ನು ಮರೆಸುವ ಪರಿಪರಿಯಾದ ನರಸೇವೆಯನ್ನು ಬದಿಗಿರಿಸಿ, ಬಂದಿರುವ ನರ ದೇಹವನ್ನು ಹರಿ

ಅವರಿವರು ಯಾರ್ಯಾರೋ ಹೇಳಿದ ಮಾತೆಂದು ಇದನ್ನು ಮರೆಯ ಬೇಡ. ಇದನ್ನು ಹೇಳಿದವರು ಹಕ್ಕಿಯ ಅರಸ. ವೇದವ್ಯಾಸರೇ ಈ ಹಕ್ಕಿಯ – ಶುಕಾಚಾರ್ಯರ ಅರಸ. ಮಹಾಭಾರತ, ಭಾಗವತ, ಬ್ರಹ್ಮಸೂತ್ರ ಮುಂತಾದ ತಮ್ಮ ಉತ್ಕೃತ ಗ್ರಂಥಗಳ ಮೂಲಕ ಇವರು ಮುಕ್ತಿಯ ಮಾರ್ಗದರ್ಶನ ಮಾಡಿದ್ದಾರೆ. ಹಕ್ಕಿಯ ಅರಸ ದೇವೇಶ ಶ್ರೀಶನ ಸಂದೇಶದಲ್ಲಿ ಸಂಶಯಕ್ಕೆ ಲವಲೇಶವೂ ಅವಕಾಶವೀಯದೆ, ದುರಾಶೆಯಿಂದ ನಿರಾಶನಾಗದೆ, ' ಉತ್ತಮ ಮಾರ್ಗವ ಹಿಡಿಯೋ ತಮ್ಮ ' –ಶ್ರೇಯಸ್ಕರ ಮಾರ್ಗವನ್ನು ಅನುಸರಿಸಿರಿ, ಎಂದು ದಾಸರು ನಮಗೆ ತಿಳಿಸಿದ್ದಾರೆ.

ಒಂದೇ ಹಕ್ಕಿ ಹಣ್ತಿಂತೈತಿ |
ಮತ್ತೊಂದ್ಹಕ್ಕಿ ನೋಡುತದಪ್ಪ "

ಹಣ್ಣೊಂದ್ಹಕ್ಕಿ ಬಡವಾಗೈತಿ ।
ತಿನ್ನದ ಹಕ್ಕಿ ಬಲಿತೈತಣ್ಣ ॥ ೨

"ಸ್ವತಂತ್ರಂ ಅಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ । ಸ್ವತಂತ್ರೋ ಭಗವಾನ್ ವಿಷ್ಣುಃ" ಸ್ವತಂತ್ರ – ಅಸ್ವತಂತ್ರ ಎಂಬ ಎರಡು ತತ್ತ್ವಗಳು. ಇದರಲ್ಲಿ ಪರಮಾತ್ಮನು ಸ್ವತಂತ್ರ. ಸರ್ವ ಗುಣಪರಿಪೂರ್ಣ, ದೋಷ ದೂರ. ಜೀವ ಅಸ್ವತಂತ್ರ, ಅಪೂರ್ಣ–ಇತ್ಯಾದಿ ವೇದವ್ಯಾಸರ ಈ ಆಶಯ ಸಾರವನ್ನು ಸಂಗ್ರಹಿಸಿದ ದಾಸರು ಇದನ್ನೇ ಮುಂದುವರೆಸಿ ಹೀಗೆ ವಿವರಿಸುವರು. ಜೀವಾತ್ಮ – ಪರಮಾತ್ಮರೆಂಬ ಎರಡು ಹಕ್ಕಿಗಳು ಈ ದೇಹದಲ್ಲಿ ನೆಲೆಸಿವೆ. ಅವೆರಡೂ ಈ ದೇಹದ ಗೂಡಿನಲ್ಲಿ ಒಡಗೂಡಿ ವಾಸಿಸುತ್ತಿರುವುವು. ಆದರೂ ಅವುಗಳಲ್ಲಿಯ ಅಂತರ ಅಜಗಜಾಂತರ. ಸ್ವತಂತ್ರ, ನಿತ್ಯತೃಪ್ತ ಹಾಗೂ ದೋಷದೂರನಾದ ಪರಮಾತ್ಮನಿಗೆ ಯಾವುದೇ ರೀತಿಯ (ಕರ್ಮ) ಫಲ ಭೋಗವಿಲ್ಲ. ಆದರೆ ಜೀವನಿಗೆ ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ-ಈ ತಾಪತ್ರಯಗಳು ಪ್ರಾರಬ್ಧ ಕರ್ಮ ಮುಂತಾದ ಕರ್ಮಫಲ ಭೋಗವು ಯಾವಾಗಲೂ ತಪ್ಪಿದ್ದಲ್ಲ. ಆದ್ದರಿಂದ ದುಃಖದ ಅಥವಾ ಸುಖ ದುಃಖ ಮಿಶ್ರಿತವಾದ ಫಲವನ್ನು ಈ ಜೀವ ಮಾತ್ರ ಅನುಭವಿಸುತ್ತದೆ ಎಂಬುದನ್ನು 'ಒಂದೇ ಹಕ್ಕಿ ಹಣ್ಣುಂತೈತಿ' ಎಂದು ದಾಸರು ಮಾರ್ಮಿಕವಾಗಿ ಹೇಳಿದ್ದಾರೆ.

ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದು ತನ್ನನ್ನು ಯಾರೂ ನೋಡಿಲ್ಲವೆಂದು ಭಾವಿಸುವಂತೆ ನಾವೂ ಸಹ ಯಾರೂ ನೋಡುತ್ತಿಲ್ಲವೆಂದು ಭಾವಿಸಿ ಅನೇಕ ಕೆಟ್ಟ ಕಾರ್ಯಗಳನ್ನು ಎಸಗುತ್ತೇವೆ. 'ಯಾರೂ ನೋಡದ ಜಾಗದಲ್ಲಿ ಹಣ್ಣು ತಿಂದು ಬರಬೇಕೆ'ಂದು ವ್ಯಾಸರಾಜರು ನುಡಿದಾಗ ಅರ್ಚಕ ಪಂಡಿತನೊಬ್ಬ ಗರ್ಭಗುಡಿಯ ಬಾಗಿಲು ಹಾಕಿ ತಾನೊಬ್ಬನೇ ಇಲ್ಲಿರುವುದು, ತನ್ನನ್ನು ಯಾರೂ ನೋಡುತ್ತಿಲ್ಲವೆಂದು ನಿರ್ಧರಿಸಿ ವ್ಯಾಸರಾಯರು ನೀಡಿದ ಹಣ್ಣನ್ನು ನುಂಗಿದನಂತೆ. ನಾವು ಇನ್ನಿತರ ಮನುಷ್ಯ ಮುಂತಾದವರ ಕಣ್ಣು ತಪ್ಪಿಸಬಹುದು. ಆದರೆ "ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್", 'ಸಹಸ್ರಶೀರ್ಷಾ ಪುರುಷಃ .....' ಇತ್ಯಾದಿ ವೇದಗಳು ನುಡಿಯುವಂತೆ ಪರಮಾತ್ಮನು ವಿಶ್ವತೋಮುಖ, ವಿಶ್ವತಶ್ಚಕ್ಷುವಾಗಿ ಎಲ್ಲೆಡೆಗೆ ಎಲ್ಲವನ್ನೂ ನೋಡುತ್ತಿರುತ್ತಾನೆ. ಆ ಪರಮಾತ್ಮನ ಕಣ್ಣು ತಪ್ಪಿಸಿ ನಾವು ಯಾವುದನ್ನೂ ಮಾಡಲಾಗದು. ಅವನು ಎಲ್ಲವನ್ನೂ ನೋಡುತ್ತಲೇ ಇರುತ್ತಾನೆ. ಇದನ್ನೇ ದಾಸರಾಯರು "ಮತ್ತೊಂದಕ್ಕಿ ನೋಡುತದಪ್ಪ" ಎಂದಿದ್ದಾರೆ. 'ಪರಮಾತ್ಮನು ಎಲ್ಲವನ್ನೂ ನೋಡುತ್ತಿರುತ್ತಾನೆ' ಎಂಬ ಪ್ರಜ್ಞೆ ನಮ್ಮಲ್ಲಿ ಮೂಡಿದಾಗ ನಾವು ಮಾಡುವ ಅಪರಾಧಗಳ ಸಂಖ್ಯೆ

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಕಡಿಮೆಯಾಗುವುದರಲ್ಲಿ ಸಂದೇಹವಿಲ್ಲ. ಈ ಪ್ರಜ್ಞೆ ಸದಾ ಜಾಗರೂಕವಾಗಿದ್ದು ತಪ್ಪಿಸ ಗದಿದ್ದವರು ನಿಜವಾದ ಜ್ಞಾನಿಗಳೇ. ಅರ್ಚಕ ಮಹಾಶಯನಿಗೆ ಗರ್ಭಗುಡಿಯಲ್ಲಿ ಕಾಣಿಸ ದಿದ್ದ ದೇವ ಕನಕದಾಸರಿಗೆ ಅಡವಿಯ ಲ್ಲಿಯೂ (ಎಲ್ಲ ಕಡೆ)ಕಾಣಿಸಿದನು.

ಅಸ್ವತಂತ್ರನೆನಿಸಿದ ಜೀವಾತ್ಮನು ಸಂಚಿತ, ಆಗಾಮಿ, ಪ್ರಾರಬ್ಧ ಮುಂತಾದ ವಿವಿಧ ಕರ್ಮಗಳ ಫಲವನ್ನು ಅನುಭವಿಸು ತ್ತಾನೆ ತರೆಗಲೆಗಳಂತೆ ಧರೆಗೆ ತಿರುಗಿ ಮರಳುವ ಜೀವರಿಗೆ ಹರಿಯ ಸಾಕ್ಷಾತ್ಕಾರ ವಾಗುವವರೆಗೆ ತೆರೆ ತೆರೆಗಳಂತೆ ಎರಗುವ ಪರಿ ಪರಿ ದುಃಖಗಳನ್ನು ಜೀವನು ತಿರುಗಿ ತಿರುಗಿ ಅನುಭವಿಸುತ್ತಾ ಮರುಗಿ ಮರುಗಿ ನೀರಾಗಿ, ಕರಗಿ ಕರಗಿ ಕೊರಗಿ, ಸೊರಗು ತ್ತಾನೆ. ಇದನ್ನೇ ದಾಸರು "ಹಣ್ಣುಂಡ್ಹಕ್ಕಿ ಬಡವಾಗೈತಿ" ಎಂದಿದ್ದಾರೆ.

ವಿಧಿ - ನಿಷೇಧಗಳಿಗೊಳಪಡದ ಸ್ವತಂತ್ರ ನಾದ ಪರಮಾತ್ಮನಿಗೆ ಯಾವ ಪಾಪ ಲೇಪವೂ ಇಲ್ಲ. ಸರ್ವ ಭೋಕ್ತೃ ಹಾಗೂ ನಿತ್ಯತೃಪ್ತನಾದ ಭಗವಂತನಿಗೆ ತುಚ್ಛ- ಉಚ್ಚ ಯಾವುದೇ ರೀತಿಯ ಕರ್ಮ ಫಲ ಭೋಗಗಳು ಕಿಂಚಿತ್ತೂ ಇಲ್ಲ. 'ಪದ್ಮಪತ್ರ ಮಿವಾಂಭಸಾ' ನೀರಿನಲ್ಲಿಯೇ ಹುಟ್ಟಿ ನೀರಿ ನಲ್ಲಿಯೇ ಬೆಳೆದು ನೀರಿನಲ್ಲಿಯೇ ನಲಿದಾ ಡುವ ಪದ್ಮ ಪತ್ರಕ್ಕೆ ನೀರು ಹೇಗೆ ಸೋಂಕುವುದೇ ಇಲ್ಲವೋ ಹಾಗೆ ಜೀವಪಕ್ಷಿ ಯೊಡನೆ ಇದ್ದು ಅವನ ಕರ್ಮಗಳನ್ನೆಲ್ಲ ವೀಕ್ಷಿ ಸುತ್ತಿರುವ ಪಕ್ಷಿ ಅಕ್ಷಯ ಫಲವೀವ ಪಕ್ಷಿ ವಾಹನ ಲಕ್ಷ್ಮೀರಮಣನಿಗೆ ಯಾವ ಕರ್ಮ ಫಲ ಭೋಗಗಳ ಲೇಪವೂ ಇಲ್ಲ. ಆಹಾರ ಸೇವಿಸಿದರೆ ಬಲಿಷ್ಠನಾಗುವ ರೀತಿ ಮಾನವ ನದ್ದಾಗಿದ್ದರೆ ಅಣಿಮಾ ಮಹಿಮಾದ್ಯಷ್ಟೈ ಶ್ವರ್ಯಗಳಿಂದ ಕೂಡಿದ ಆ ಭಗವಂತನ ರೀತಿ ಬೇರೆಯದು. ಮನುಜರಂತೆ ಅವನು ಆಹಾರ - ನಿಹಾರಗಳಿಂದ ದೂರವಿದ್ದರೂ ಸೊರಗುವುದಿಲ್ಲ. ಅಷ್ಟೇ ಅಲ್ಲ ಬಲಿಷ್ಠನಾ ಗಿರುತ್ತಾನೆ. ಈ ರಹಸ್ಯವನ್ನೇ ದಾಸರು "ತಿನ್ನದ ಹಕ್ಕಿ ಬಲಿತೈತಣ್ಣ" ಎಂದು ಕ್ರೋಡೀಕರಿಸಿದ್ದಾರೆ.

ಸುಳ್ಳಲ್ಲ ನೀನು ಕೇಳೋ ತಮ್ಮ ।
ದ್ವಾಸುಪರ್ಣ ಶ್ರುತಿಯಲ್ಲೈತೆ ॥
ಒಂದೇ ಕುಲದ ಹಕ್ಕ್ಯಲ್ಲಣ್ಣ ।
ಒಂದೇ ಕುಲವೆಂದು ತಿಳಿಯಲು ಬೇಡ ।
ತಿಳಿದರೆ ನಿನಗೆ ಕೇಡಾದೀತು '೩ ॥

ದ್ವಾಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲ ಸ್ವಾದ್ವತ್ತಿ
ಅನಶ್ನನ್ನನ್ಯೋ ಅಭಿಚಾಕಶೀತಿ ॥

ಎಂಬ ಉಪನಿಷದ್ವಾಕ್ಯದಲ್ಲಿ ಈ ಮೇಲೆ ವಿವರಿಸಿದ ವಿಷಯಗಳನ್ನು ಬಣ್ಣಿಸಲಾಗಿದೆ. ಆದ್ದರಿಂದ ಇದು ಸುಳ್ಳು ಮಾತೆಂದು ಭಾವಿ ಸಬೇಡಿ. ಗುಡಿ - ಗುಂಡಾರಗಳಲ್ಲಿ ಬೀಡು ಬಿಟ್ಟು ನಡೆಯುತ್ತಾ ಅಲೆದಾಡುವ, ಮನೆ ಗಡಿಯಲ್ಲಿ ಅಡಿಯಿಟ್ಟು 'ಬೇಡಿದ್ದನ್ನು ತಡ ಮಾಡದೇ ನೀಡಿ ಮೃಡಸಖನಿಂದ ಬೇಕಾದ್ದು ಪಡೆಯಿರಿ' ಎಂದು ಬಡಬಡನೆ ಗಡಿಬಿಡಿ ಯಿಂದ ಹೊಟ್ಟೇಪಾಡಿಗಾಗಿ ಬಡಾಯಿ ಕೊಚ್ಚುವ ಬುಡಬುಡಿಕೆಯವನಂತೆ 'ಏನೋ ಇವನು ಬಡಬಡಿಸುತ್ತಿದ್ದಾನೆ' ಎಂದು ಇದನ್ನು ಕಡೆಗಣಿಸ ಬೇಡಿ. ಇದು ಸ್ವಕಪೋಲ ಕಲ್ಪಿತ ಮಾತಲ್ಲ, "ದ್ವಾಸು ಪರ್ಣಾ"... ಇತ್ಯಾದಿ ಶ್ರುತಿಯಲ್ಲಿ ಉಕ್ತ ವಾಗಿದೆ, ಎಂಬುದನ್ನು ದಾಸರಾಯರು "ಸುಳ್ಳಲ್ಲಿ ನೀನು ಕೇಳೋ ತಮ್ಮ। ದ್ವಾಸು ಪರ್ಣ ಶ್ರುತಿಯಲ್ಲೈತೆ॥" ಎಂದಿದ್ದಾರೆ.

ತೊಗಲು ಒಂದೇ ಇದ್ದರೂ ಕಾಗೆ- ಕೋಗಿಲೆಗಳಲ್ಲಿಯ ಅಗಲ (ಅಂತರ) ಹಗಲು ರಾತ್ರಿಯಷ್ಟು. ಹಾಗೆಯೇ ಒಂದೇ ಗೂಡಿನಲ್ಲಿರುವ ಜೀವ ಈಶರೆಂಬ ಈ ಪಕ್ಷಿಗ ಳಲ್ಲಿಯೂ ಮೇರು ಪರ್ವತ - ಸಾಸಿವೆಗ ಳಷ್ಟು ಅಂತರವಿದೆ. ಸರ್ವೇಶ್ವರನಾದ ಪರ ಮೇಶ್ವರ ಸ್ವತಂತ್ರ. ಸರ್ವಗುಣಪರಿ ಪೂರ್ಣ. ದೋಷದೂರ, ಸರ್ವನಿಯಾಮಕ, ಸರ್ವವ್ಯಾಪ್ತ-ಇತ್ಯಾದಿ ಅನೇಕ ಗುಣ ವಿಶಿ ಷ್ಟನು. ಜೀವ ಅಸ್ವತಂತ್ರ, ಅಪರಿಪೂರ್ಣ, ದೋಷಸಹಿತ, ಭಗವನ್ನಿಯಾಮ್ಯ ಇತ್ಯಾದಿ ಲಕ್ಷಣಗಳುಳ್ಳವನು. ಹೀಗೆ ಬೇರೆ ಬೇರೆ ಯಾದ ಈ ಜೀವೇಶಪಕ್ಷಿಗಳಲ್ಲಿಯ ಭೇದ ಸಕಲ ಶ್ರುತಿ, ಸ್ಮೃತಿಗಳಿಂದ ಬೋಧಿತವಾ ದದ್ದು. ವಿರುದ್ಧ ಗುಣ ಸ್ವಭಾವ ಹೊಂದಿದ ವರಿಗೆ ಪ್ರತ್ಯಕ್ಷ, ಅನುಮಾನಾದಿ ಪ್ರಮಾಣ ಗಳಿಂದಲೂ ಅಭೇದ ಸಾಧನೆ ಅಸಾಧ್ಯ, ಅಸಂಗತ ಹೀಗೆ ಜೀವೇಶರು ಭಿನ್ನ ಭಿನ್ನ ರಾಗಿರುವರು. ಭಿನ್ನರಾದ ಜೀವೇಶರನ್ನು ಒಂದೇ ಎಂದು ತಿಳಿಯ ಬೇಡ. ಹಾಗೆ ತಿಳಿ ದರೆ ಆ ವಿಪರೀತ ಜ್ಞಾನದಿಂದ ಅಧಃಪತನ ವಾಗುವುದರಲ್ಲಿ ಸಂದೇಹ ಇಲ್ಲ. ಈ ವೇದ ಹೃದಯ ರಹಸ್ಯವನ್ನೇ ದಾಸರು "ಒಂದೇ ಕುಲದ ಹಕ್ಕ್ಯಲ್ಲಣ್ಣ ಒಂದೇ ಕುಲವೆಂದು ತಿಳಿಯಲು ಬೇಡ । ತಿಳಿದರೆ ನಿಮಗೆ ಕೇಡಾ ದೀತು" ಎಂದು ವಿವರಿಸಿ ಎಚ್ಚರಿಸಿ ದ್ದಾರೆ.

ಪುರಂದರದಾಸರು ಬುಡುಬುಡಿಕೆ ಪದ್ಯಗ ಳಲ್ಲಿ ಹಕ್ಕಿಯ ಮೂಲಕ ದಿವ್ಯ ಸಂದೇಶ ನೀಡಿದ್ದಾರೆ. ನಾವು ಅದನ್ನು ಅರಿತು ಅಳವ ಡಿಸಿಕೊಳ್ಳ ಬೇಕು. ಹಕ್ಕಿ ಹೇಳಿದಂತೆ ಉತ್ತಮ ಮಾರ್ಗ ಅನುಸರಿಸಬೇಕು. 'ಈ ಒಣ ವೇದಾಂತದಲ್ಲಿ ಏನಿದೆ?' ಎಂದು ಅಸಡ್ಡೆಯನ್ನು ತೋರಿದರೆ ಅಧೋಗತಿಯಾ ದೀತು. ರೆಕ್ಕೆ - ಪುಕ್ಕಗಳಿಂದ ದಿಕ್ಕಿನಲ್ಲೆಲ್ಲಾ ಹಾರುತ್ತಾ ಜನರಿಕ್ಕಿದ ಹಾಗೂ ಸಿಕ್ಕಿದ ಅಕ್ಕಿ, ಅವಲಕ್ಕಿಗಳನ್ನೆಲ್ಲ ತನ್ನ ಕೊಕ್ಕಿ ನಿಂದ ಮುಕ್ಕುವ ಸುಕ್ಕು ಗಟ್ಟಿದ ಈ ಹಕ್ಕಿ ಹೇಳಿದ ಚಿಕ್ಕ ಮಾತೆಂದು ಸೊಕ್ಕಿ ನಿಂದ ಉಕ್ಕಿ ನಕ್ಕರೆ, ಸಿಕ್ಕಿದ್ದೆಲ್ಲಾ ದಕ್ಕಿಸಿಕೊಳ್ಳಬಹುದೆಂದು ಸಿಕ್ಕಾಪಟ್ಟೆ ರೊಕ್ಕಗಳಿಸಿ ಉಕ್ಕುವಂತೆ ತುಂಬಿರತಕ್ಕ ಬೊಕ್ಕಸಕ್ಕೆ ಧಕ್ಕೆ ತಗುಲಿ ಬರಿದಾದಾಗ ಬಿಕ್ಕಸ ಬೆರಗಾಗಿ, ದಿಕ್ಕುಪಾಲಾಗಿ ಬಿಕ್ಕಿ ಬಿಕ್ಕಿ ಅಳಬೇಕಾದಂತಹ ತಕ್ಕ ಶಿಕ್ಷೆ ದೊರ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ತೀತೆಂಬ ಉತ್ತಮ ಶಿಕ್ಷಣದ ಸೂಕ್ಷ್ಮ ತಿಳಿವಳಿಕೆಯನ್ನು ದಾಸರು ಇಲ್ಲಿ ನೀಡಿ "ಹಕ್ಕಿಯು ಅರಸ ಆಡಿದ ಮಾತು। ಉತ್ತಮ ಮಾರ್ಗವ ಹಿಡಿಯೋ ತಮ್ಮ ॥" ಎಂದಿದ್ದಾರೆ.

ಹೀಗೆ ಪುರಂದರದಾಸರು, ಸುಳಾದಿ, ಪದ್ಯಗಳು, ಉಗಾಭೋಗ ಮೊದಲಾದ ತಮ್ಮ ಅನೇಕ ಕೃತಿಗಳಲ್ಲಿ ವ್ಯಾಸರ ದಿವ್ಯ ಸಂದೇಶಗಳನ್ನೂ ತೋರಿಸಿದ್ದಾರೆ. ಮೇಲ್ನೋಟಕ್ಕೆ ಗಂಧದ ಕೊರಡು, ಇತರ ಕಟ್ಟಿಗೆಗಳು ಹಾಗೂ ಕಬ್ಬಿನ ಜಲ್ಲೆ. ಜೋಳದ ದಂಟು–ಇವೆಲ್ಲವೂ ಒಂದೇ ಎಂದು ಕಂಡು ಬಂದರೂ ಗಂಧದ ಕೊರಡನ್ನು ತೇಯ್ದಾಗ ಹೊರ ಹೊಮ್ಮುವ ಪರಿಮಳ, ಕಬ್ಬಿನ ಜಲ್ಲೆಯನ್ನು ಜಗಿದಾಗ ಆಗುವ ರಸಾನುಭವಗಳಂತೆ ದಾಸರ ಪದ-ಪದ್ಯ ಕೃತಿಗಳು ಮೇಲ್ನೋಟಕ್ಕೆ ಸಾಮಾನ್ಯವೆಂದು ಕಂಡು ಬಂದರೂ ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಆಳವಾದ ವ್ಯಾಸರ ದಿವ್ಯ ಭವ್ಯ ಸಂದೇಶಗಳು ಅಲ್ಲಿ ಅಡಕವಾಗಿರುವುದನ್ನು ಗಮನಿಸಬಹುದು, ವೇದ – ವೇದಾಂತಗಳ, ಭಾರತ – ಭಾಗವತಾದಿಗಳ ರಹಸ್ಯಾರ್ಥಗಳು ಪುರಂದರ ದಾಸರ ಪದಗಳಲ್ಲಿ ಅಡಕವಾಗಿರುವುದರಿಂದ ಅದನ್ನು ಕಂಡ ವ್ಯಾಸರಾಜರು ಇದನ್ನು "ಪುರಂದರೋಪನಿಷತ್" ಎಂದು ಕರೆದಿದ್ದಾರೆ. ದಾಸರ ವಿಶಿಷ್ಟವಾದ ತತ್ತ್ವಜ್ಞಾನ, ಆಳವಾದ ಅನುಭವದ ಆದರ್ಶ ಜೀವನ ಇವೆಲ್ಲವುಗಳನ್ನು ಗಮನಿಸಿದ ವ್ಯಾಸರಾಜರು "ದಾಸರೆಂದರೆ ಪುರಂದರ ದಾಸರಯ್ಯಾ" ಎಂದು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಇಂತಹ ಪುರಂದರ ಉಪಕಾರ ಸ್ಮರಣೆ ಮಾಡಿ ಅವರ ಕೃತಿಗಳ ಪ್ರಯೋಜನ ಪಡೆದು ಧನ್ಯರಾಗೋಣ.

ಮನ್ಮನೋಽಭೀಷ್ಟವರದಂ
ಸರ್ವಾಭೀಷ್ಟ ಫಲಪ್ರದಂ।
ಪುರಂದರ ಗುರುಂ ವಂದೇ
ದಾಸಶ್ರೇಷ್ಠಂ ದಯಾನಿಧಿಂ ॥
"ಪುರಂದರ ವಿಠಲಾರ್ಪಣಮಸ್ತು"

———




ಪೂರ್ವದಲ್ಲಿ ವಿಶಿಷ್ಟಾದ್ವೈತ ತತ್ತ್ವವನ್ನು ಅನೇಕ ಮಹರ್ಷಿಗಳು ಆಚಾರ್ಯರು ದ್ರವಿಡ ನಾಡಿನ ಆಳ್ವಾರರು ಪ್ರತಿಪಾದಿಸಿದ್ದಾರೆ. ಪರಾಶರ, ನಾರದ, ವ್ಯಾಸ, ವಸಿಷ್ಠ ಮಹರ್ಷಿಗಳು, ಟಂಕ ದ್ರಮಿಡ, ಗುಹದೇವ, ನಾಥಮುನಿ, ಯಾಮುನಾಚಾರ್ಯ, ಪಿಳ್ಳೈಲೋಕಾಚಾರ್ಯ ಮುಂತಾದ ಆಚಾರ್ಯರು ಈ ಸಿದ್ಧಾಂತವನ್ನು ಮಾನವರ ಕಲ್ಯಾಣಕ್ಕಾಗಿ ಪ್ರಚಾರಮಾಡಿದರು. ತಮಿಳು ವೇದ ಹಾಗೂ ಸಂಸ್ಕೃತ ವೇದಗಳ ತಳಹದಿ ಮೇಲೆ ನಿಂತಿರುವ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಕ್ರಿ. ಶ. ಹನ್ನೊಂದನೆಯ ಶತಮಾನದಲ್ಲಿ ಶ್ರೀ ರಾಮಾನುಜರು ವಿಶೇಷವಾಗಿ ಎರಡು ವೇದಗಳ ಸಿದ್ಧಾಂತದ ತಿರುಳನ್ನು ಸಮನ್ವಯಗೊಳಿಸಿ ಜನ ಸಾಮಾನ್ಯರ ಹೃದಯಕ್ಕೆ ತಿಳಿಯುವಂತೆ ಮಾಡಿ, ಬಹು ಉಪಕಾರ ಮಾಡಿದರು. ವಿಶಿಷ್ಟಾದ್ವೈತ ಎಂದರೆ ವಿಶೇಷಣಗಳಿಂದ ಕೂಡಿದ ಅದ್ವೈತ. ಅದ್ವೈತಮತದಲ್ಲಿ ಪ್ರತಿಪಾದಿಸಿದ ಬ್ರಹ್ಮ, ಜೀವ, ಜಗತ್ತು, ಎಂಬುವ ತತ್ತ್ವಗಳನ್ನು ತನ್ನದೇ ಆದ ವಿಶೇಷರೀತಿ ರೀತಿಯಲ್ಲಿ ಹೇಳುವ ಕಾರಣ ಇದಕ್ಕೆ ಈ ಹೆಸರು ಬಂದಿದೆ. ಎಲ್ಲಾ ಮತದವರಂತೆ, ತತ್ತ್ವ ಹಿತ ಪುರುಷಾರ್ಥಗಳು ಈ ಮತದಲ್ಲೂ ಉಂಟು. ಈ ಮತದಲ್ಲಿ ಪರತತ್ತ್ವ ಶ್ರೀಮನ್ನಾರಾಯಣನು. ಆ ತತ್ತ್ವವನ್ನು ಪಡೆಯುವ ಸಾಧನೆ ಹಿತವಾದುದು. ಆ ಹಿತಸಾಧನೆ ಭಕ್ತಿಜ್ಞಾನಪೂರ್ವಕವಾದ ಶರಣಾಗತಿ, ಇವುಗಳ ಪುರುಷಾರ್ಥವೇ ಮೋಕ್ಷ, ವಿಶಿಷ್ಟಾದ್ವೈತದ ಮೂಲ ತತ್ತ್ವಗಳು ಮೂರು. ಚಿತ್, ಅಚಿತ್ ಹಾಗೂ ಈಶ್ವರ. ಚಿತ್ ಎಂದರೆ ಜೀವ ಎಂಬರ್ಥ. ಶರೀರ ಇಂದ್ರಿಯಗಳಿಗಿಂತ ಬೇರೆಯಾಗಿ ವಿಲಕ್ಷಣವಾಗಿ ನಿತ್ಯವಾಗಿ ಅಣು ಸ್ವರೂಪವಾಗಿ ಈಶ್ವರನಿಗೆ (ಪರಮಾತ್ಮನಿಗೆ) ಶೇಷಭೂತವಾಗಿ ಇರುತಕ್ಕಂತಹುದು. ಮೋಕ್ಷ ಕಾಲದಲ್ಲಿ ಈ ಜೀವಗಿಣಿಯು ಪಂಜರದಿಂದ ಹೊರಟುಹೋಗುವಂತೆ ಶರೀರದಿಂದ ಬೇರೆಹೊಂದಿ ಪರಮಾತ್ಮನ ಸನ್ನಿಧಿಯಲ್ಲಿ ಹೋಗಿ ಸೇರಿ ಅಲ್ಲಿ ಆತನ ಕೈಂಕರ್ಯದಲ್ಲಿ ನಿರತಿಶಯವಾದ ಆನಂದವನ್ನು ಪಡೆಯುತ್ತದೆ. ಅಚಿತ್ ಅಂದರೆ ಜಡವಸ್ತು ಅಥವಾ ಈ ಪ್ರಕೃತಿ. ಈ ಚಿತ್ ಹಾಗೂ ಅಚಿತ್‌ಗಳು ಆ ಪರವಾಸುದೇವನ ಶರೀರಗಳಾಗಿರುತ್ತವೆ. ಈಶ್ವರನು ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನು. ಚೇತನಾಚೇತನಗಳ ಅಂತರ್ಯಾಮಿ. ಈತನು ಚಿತ್ ಅಚಿತ್‌ಗಳೊಡನೆ ಇದ್ದರೂ ವಿಶಿಷ್ಟನು, ನಿತ್ಯನು, ಶಾಶ್ವತನು, ಸಮಸ್ತ ಕಲ್ಯಾಣ ಗುಣ ಪೂರ್ಣನು. ಈತನಿಗೆ ಕರ್ಮಬಂಧನವಿಲ್ಲ, ಈಶ್ವರನ ಶಕ್ತಿಯೇ ಲಕ್ಷ್ಮಿ, ಸೃಷ್ಟಿಗೆ ಮೊದಲು ಸೂಕ್ಷ್ಮಾವಸ್ಥೆಯಲ್ಲಿ ಇರುವ ಚಿತ್ ಅಚಿತ್‌ಗಳೊಡನೆ ಈಶ್ವರ ಅಂತರ್ಯಾಮಿಯಾಗಿ ವಿಶಿಷ್ಟನಾಗಿರುತ್ತಾನೆ. ಕಾರ್ಯಾವಸ್ಥೆಯಲ್ಲಿ ಅಂದರೆ ಸ್ಥೂಲಾವಸ್ಥೆಯಲ್ಲೂ ಚಿತ್ ಅಚಿತ್‌ಗಳೊಡನೆ ವಿಶಿಷ್ಟನಾಗಿ ಕರ್ಮ ಬಂಧನ ರಹಿತನಾಗಿ ಆನಂದ ಪೂರ್ಣನಾಗಿರುತ್ತಾನೆ.

"ಜಾತಸ್ಯ ಮರಣಂ ಧ್ರುವಂ" ಎಂಬಂತೆ ಹುಟ್ಟಿದವನು ಒಂದು ದಿನ ಸಾಯಲೇಬೇಕು. ಸಂಸಾರ ಸಮುದ್ರದಲ್ಲಿ ಸಿಲುಕಿ ನರಳುತ್ತಿರುವ ಜೀವನಿಗೆ ಅದರಿಂದ ತಪ್ಪಿಸಿಕೊಂಡು ಪಾರಾಗಬೇಕಾದರೆ ದೇಹಕ್ಕೂ ಆತ್ಮನಿಗೂ ಇರುವ ವ್ಯತ್ಯಾಸಗಳನ್ನು ವಿವೇಕದಿಂದ ಗುರುವಿನ– ಆಚಾರ್ಯನ ಮುಖಾಂತರ ತಿಳಿದುಕೊಳ್ಳಬೇಕು. ಶ್ರೀ ವೈಷ್ಣವ ಸಂಪ್ರದಾಯದಲ್ಲಿ ಆಚಾರ್ಯನಿಗೆ ಹೆಚ್ಚಿಗೆ ಪ್ರಶಸ್ತಿ ಹಾಗೂ ಸ್ಥಾನ ಇವೆ. ಚೇತನನ ಅಜ್ಞಾನ, ಅಹಂಕಾರ ಮಮಕಾರಗಳು ತೊಲಗಿ ಭಗವಂತನ ಕೃಪೆ ಬೇಕಾದರೆ ಸದ್ಗುರುವಿನ ಆಶೀರ್ವಾದ ಅತ್ಯವಶ್ಯಕ. ಆಚಾರ್ಯನು ನೀಡುವ ಮಂತ್ರಾರ್ಥಗಳ ರಹಸ್ಯ,ಭಗವಂತನನ್ನು ಕಾಣುವ ಜ್ಞಾನ ಸೋಪಾನಕ್ಕೆ ಅಡಿಗಲ್ಲು, ಭಗವಂತನನ್ನು ಉಪಾಸಿಸುವವರಿಗೆ ನಿರತಿಶಯವಾದ ಮೋಕ್ಷ ಸಾಮ್ರಾಜ್ಯವೂ ಮಹದೈಶ್ವರ್ಯವಾದ ಆತನ ನಿತ್ಯ ಕೈಂಕರ್ಯವೂ ಲಭಿಸುವುದು. ಭಗವಂತನ ಕೃಪೆ, ಪ್ರೇಮ ಪಡೆಯಲು ಸುಲಭವಾದ ಮಾರ್ಗ ಪ್ರಪತ್ತಿ ಅಥವಾ ಶರಣಾಗತಿ ಮಾರ್ಗ. ತಪಸ್ಸುಗಳಲ್ಲಿ ಪ್ರಪತ್ತಿಯೇ ಶ್ರೇಷ್ಠ ಎಂಬುದಾಗಿ ಭಾರದ್ವಾಜ ಮಹರ್ಷಿಗಳು "ನ ಪ್ರಪತ್ತೇಃ ಪರಾವಿದ್ಯಾ । ನ ವಿಷ್ಣೋಃ ದೈವತಂ ಪರಂ" ಎಂಬುವುದಾಗಿ ಘೋಷಿಸಿದ್ದಾರೆ. ಪ್ರಪತ್ತಿ ಎಂದರೆ ದೇವರಲ್ಲಿ ದೃಢವಿಶ್ವಾಸವಿಟ್ಟು ಅವನನ್ನೇ ನಂಬಿ ಅವನ ಕೃಪೆಗಾಗಿ ಹಾತೊರೆಯುತ್ತಾ ಆತ್ಮ ಸಮರ್ಪಣಾರೂಪವಾದ ಶರಣಾಗತಿಯನ್ನು ಮಾಡುವ ಸುಲಭವಾದ ತಪಸ್ಸಿನ ಮಾರ್ಗ.

ಸದ್ಗುರುವನ್ನು ಆಶ್ರಯಿಸಿ ತತ್ತ್ವಜ್ಞಾನನಿಷ್ಠನಾಗಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಭಗವಂತನ ಪ್ರೀತ್ಯರ್ಥವಾಗಿ ಮಾಡುವ ಕೈಂಕರ್ಯಗಳೆಂದು ಭಾವಿಸಿ ಅವುಗಳನ್ನು ಮಾಡುತ್ತಾ ಬಂದರೆ ಮರಣಾವಸ್ಥೆಯಲ್ಲಿ ಜ್ಞಾನ ನಾಡಿ ನಾಶಹೊಂದಿ ಜೀವಾತ್ಮನಲ್ಲಿ ವಾಸ ಮಾಡುವ ಸೂಕ್ಷ್ಮ ಶರೀರವು ಪಾಂಚಭೌತಿಕವಾದ ಸ್ಥೂಲಶರೀರವನ್ನು ಬಿಟ್ಟು, ಶ್ರೀಮನ್ನಾರಾಯಣನ ಸನ್ನಿಧಿಗೆ ಶೇಷಭೂತನಾಗಿ ಹೋಗಿ ಸೇರಿ ಅಲ್ಲಿ ಪರಮಾನಂದವನ್ನು ಪಡೆಯುತ್ತದೆ.

ಮನುಷ್ಯನು ಮಾಡುವ ಕರ್ಮಗಳ ಫಲವು ಸದಾ ಅವನನ್ನು ಅನುಸರಿಸಿಯೇ ಇರುತ್ತದೆ. ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಫಲಕ್ಕೆ ತಕ್ಕಂತೆ ಶುಭಾಶುಭ ಫಲಗಳನ್ನು ಅವನೊಬ್ಬನೇ ಉಪಭೋಗಿಸುತ್ತಾನೆ. "ಸ್ವಕರ್ಮ ಫಲ ನಿಕ್ಷೇಪಂ ವಿಧಾನ ಪರಿರಕ್ಷಿತು" ಎಂಬಂತೆ ಚೇತನನು ಮಾಡಿದ ಕರ್ಮಗಳು ಶುಭಾಶುಭ ಫಲಗಳ ನಿಕ್ಷೇಪ ರೂಪದಲ್ಲಿರುತ್ತದೆ ( Deposit ಅಥವಾ ಬ್ಯಾಂಕ್ ಬ್ಯಾಲೆನ್ಸ್ ಇದ್ದಹಾಗೆ ) ಅದೇ ನಿಧಿಯನ್ನು ಋತುಗಳು ಕಾಲಕ್ಕೆ ಸರಿಯಾಗಿ ಕಾಣಿಸಿಕೊಳ್ಳುವಂತೆ ಹಿಂದೆ ಮಾಡಿದ ಪಾಪ ಪುಣ್ಯಗಳ ನಿಕ್ಷೇಪ ಕಾಲಕ್ಕೆ ಸರಿಯಾಗಿ ಫಲವನ್ನು ಕೊಡುತ್ತದೆ. ಈ ಕರ್ಮಫಲಾನುಭವಗಳನ್ನು ತಪ್ಪಿಸಿಕೊಳ್ಳಲು ಸುಲಭೋಪಾಯ ಪ್ರಪತ್ತಿ ಅಥವಾ ಶರಣಾಗತಿಮಾರ್ಗವು. ಇದಕ್ಕೆ ಜಾತಿ, ಕುಲ, ಲಿಂಗಬೇಧವಿಲ್ಲ. ಕರ್ಮ, ಜ್ಞಾನ ಮಾರ್ಗಗಳಂತೆ ಕಠಿಣವಾದ ನಿಯಮಗಳು ಪ್ರಪತ್ತಿ ಮಾರ್ಗಕ್ಕೆ ಇಲ್ಲ. ಮನುಷ್ಯನು ಫಲಾಪೇಕ್ಷೆಯಿಲ್ಲದೆ ಎಲ್ಲಾವಿಧವಾದ ಸಾತ್ವಿಕ ಕರ್ಮಗಳನ್ನು ಭಕ್ತಿಯಿಂದ ಕೇವಲ ಕೈಂಕರ್ಯಭಾವದಿಂದ ಮಾಡಿದರೆ ಭಗವಂತನು ಅವನಲ್ಲಿ ಸುಪ್ರೀತನಾಗುತ್ತಾನೆ. ವರಾಹ ಪುರಾಣದಲ್ಲಿ ಭಗವಂತ ತನ್ನ ಶರಣಾಗತರನ್ನು ರಕ್ಷಿಸಲು ಮಾಡಿದ ಪ್ರತಿಜ್ಞೆ ಎಲ್ಲಾ ಪ್ರಪನ್ನರಿಗೆ ಚರಮೋಪಾಯ.

"ಸ್ಥಿತೇ ಮನಸಿ ಸುಸ್ವಸ್ಥೇ ಶರೀರೇ
ಸತಿ ಯೋನರಃ
ಧಾತುಸಾಮ್ಯೇ ಸ್ಥಿತೇಸ್ಮರ್ತಾ
ವಿಶ್ವರೂಪಂಚ ಮಾಮಜಂ
ತತಸ್ತಂ ಮ್ರಿಯಮಾಣಂತಂ ಕಾಷ್ಠ
ಪಾಷಾಣ ಸನ್ನಿಭಂ

**ಶ್ರೀ ಕಂದಾಡೈ ಕೇಶವನ್**

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ್ಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾ ಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಸಂಪರ್ಕಿಸಿ

**ಆಡಳಿತ ನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ
ಪರಮಾಂಗತಿಂ"



"ಶರೀರ, ಮನಸ್ಸು, ಜ್ಞಾನ ಎಲ್ಲವೂ ಸರಿಯಾಗಿರುವಾಗ ಯಾವನಾದರೂ ನನ್ನಲ್ಲಿ ಶರಣು ಹೊಂದಿದ್ದರೆ ಅಂತಹವನನು ಸಾಯುವ ಸಮಯದಲ್ಲಿ ನನ್ನ ಸ್ಮರಣೆ ಮಾಡದೆ ಕಲ್ಲು ಕಟ್ಟಿಗೆಯಂತೆ ಬಿದ್ದಿದ್ದರೂ ಅವನನ್ನು ನಾನು ಸ್ಮರಿಸಿಕೊಂಡು ಪರಮಪದವನ್ನು ನೀಡುತ್ತೇನೆ"–ಎಂಬುದಾಗಿ ಹೇಳಿರುವಾಗ ಕೈಕಾಲು ಗಟ್ಟಿಯಾಗಿರುವಾಗ 'ಕೃಷ್ಣಾ ಎನಬಾರದೆ.' ಅಂತಿಮಕಾಲದಲ್ಲಿ ಆ ಅನಂತನು ನಿಜವಾಗಿ ಪರಮಪದವನ್ನು ಕೊಡುತ್ತಾನೆ. ಭಗವಂತನ ಭಕ್ತನು ಯಾರೇ ಆಗಲಿ ಯಾವ ಕುಲದವನೇ ಆಗಲಿ ಸರ್ವಶ್ರೇಷ್ಠನು. ಭಗವಂತನ ಭಕ್ತನನ್ನು ಕಂಡ ತಕ್ಷಣ ದೀರ್ಘ ಪ್ರಣಾಮವನ್ನು ಮಾಡಬೇಕೆಂಬುದೇ ವೈಷ್ಣವ ಧರ್ಮ. "ಯಃಪಶ್ಯತಿ ಶುಭಾಚಾರಂ ವೈಷ್ಣವಂ ವೀತ ಕಲ್ಮಷಂ ಯಸ್ಮಿನ್ ತಸ್ಮಿನ್ ಕುಲೇ ಜಾತಂ ದಂಡವತ್ ಪ್ರಣಮೇತ್ ಭುವಿ''. ಶ್ರೀ ರಾಮಾನುಜರು ಕ್ರಿ. ಶ. ಹನ್ನೊಂದನೆಯ ಶತಮಾನದಲ್ಲೇ ಬಹಳ ವಿಶಾಲ ಮನೋಭಾವದಿಂದ "ಶ್ವಪಚೋಪಿ ಮಹೀಪಾಲ ವಿಷ್ಣುಭಕ್ತೋ ದ್ವಿಜಾದಿಕಃ" ಎಂಬ ಸೂತ್ರದಿಂದ ಉತ್ತೇಜಿತರಾಗಿ ಹರಿಜನರನ್ನು ಮೇಲ್ಕೋಟೆ ದೇವಸ್ಥಾನದೊಳಕ್ಕೆ ಬಿಡಲು ಅನುಮತಿಕೊಟ್ಟರು. ಕಾರಣ ಎಲ್ಲರ ಹೃದಯದ ಅಂತರಾಳದಲ್ಲಿ ಅಂತರ್ಯಾಮಿಯಾಗಿ ಇರುವವನು ಆ ಪರಮಾತ್ಮನೇ ಅಲ್ಲವೆ! ಜಗದ್ರಕ್ಷಕನಾದ ಸೂರ್ಯನಾರಾಯಣನು ಎಲ್ಲರ ಮೇಲೂ ತನ್ನ ಕೃಪೆಯ ಕಿರಣಗಳನ್ನು ಚಾಚಿ ಪರಿಶುದ್ಧರನ್ನಾಗಿ ಮಾಡುವುದಿಲ್ಲವೆ! ಪುನೀತಳಾದ ಗಂಗಾಮಾತೆ ಸಮಸ್ತರಿಗೂ ದಾರಕ ಪೋಷಕಳಾಗಿಲ್ಲವೆ! ಯಾರ ಮನೆಯ ಹಸುವೂ ನೀಡುವ ಹಾಲು ಅಮೃತ ಪ್ರಾಯವಾದುದಲ್ಲವೆ! ಇಂದಿಗೂ ಎಲ್ಲಾ ಜಾತಿಯಲ್ಲಿ ಹುಟ್ಟಿರುವ ಆಳ್ವಾರುಗಳು ಶ್ರೀ ವೈಷ್ಣವರಿಗೆ ನಿತ್ಯ ಸ್ಮರಣೀಯರಲ್ಲವೆ? ಭಗವಂತನ ದಿವ್ಯ ಗುಣಗಳನ್ನು ಅನುದಿನವೂ ತಪ್ಪದೆ ಅನುಸಂಧಾನ ಮಾಡಿ, ಆಚಾರ್ಯಮುಖೇನ ದ್ವಯ ಅಷ್ಟಾಕ್ಷರಿ ಮಂತ್ರಗಳ ಉಪದೇಶ ಹೊಂದಿ, ಭಗವತ್ ಪ್ರಾಪ್ತಿಗಲ್ಲದ ಎಲ್ಲಾ ಧರ್ಮಗಳನ್ನು ತ್ಯಜಿಸಿ ಭಗವಂತನನ್ನು ಅನನ್ಯ ಭಕ್ತಿಯಿಂದ ಶರಣು ಹೊಂದಿದರೆ ಅಂತಹವನನ್ನು ಆ ಪರಮಾತ್ಮ ಉದ್ಧಾರಮಾಡುತ್ತಾನೆ. ಈ ಶರಣಾಗತಿಯ ತತ್ತ್ವವನ್ನು ಶ್ರೀ ಕೃಷ್ಣ ಪರಮಾತ್ಮನು ಗೀತೆಯಲ್ಲಿ ಅರ್ಜುನನಿಗೆ ಅಭಯ ಪ್ರಧಾನ ಮಾಡುತ್ತಾ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣುವ್ರಜ ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಎಂಬುದಾಗಿ ಹೇಳಿದ್ದಾನೆ. ಈ ಶ್ಲೋಕವನ್ನೇ ವಿಶಿಷ್ಟಾದ್ವೈತದಲ್ಲಿ ಚರಮಶ್ಲೋಕ ಎಂಬುದಾಗಿ ಕರೆಯುತ್ತಾರೆ. ಭಗವಂತನಿಗೆ ಅನೇಕ ಗುಣಗಳಿವೆ. ಲಕ್ಷ್ಮೀದೇವಿಯ ಪುರುಷಕಾರದಿಂದ ಚೇತನನ ಅಪರಾಧಗಳನ್ನು ಮನ್ನಿಸುವ ಸಾಮರ್ಥ್ಯವೂ ಇದೆ. ಎಷ್ಟೇ ತಪ್ಪುಗಳನ್ನು ಮಾಡಿದ್ದರೂ ಆ ಮಹಾತಾಯಿ ತನ್ನ ಮಕ್ಕಳ ತಪ್ಪನ್ನು ಮನ್ನಿಸುವಂತೆ ಭಗವಂತನಲ್ಲಿ ಅಂಗಲಾಚಿ ಬೇಡಿ ಆ ಚೇತನನ ತಪ್ಪುಗಳನ್ನು ಮನ್ನಿಸುವಂತೆ ಮಾಡುತ್ತಾಳೆ. ರಾಮಾಯಣದಲ್ಲಿ ಶ್ರೀ ಮಾರುತಿಯು ಸೀತೆಗೆ ಹಿಂಸೆ ಕೊಟ್ಟ ರಾಕ್ಷಸಿಯರನ್ನು ಸಂಹರಿಸಲು ಅಪ್ಪಣೆ ಕೇಳಿದಾಗ ಆ ಮಹಾತಾಯಿ ಬೇಡವೆಂದು ಅಡ್ಡಿ ಬಂದ ದೃಶ್ಯ, ಕಾಕಾಸುರನ ಸಂರಕ್ಷಣೆ, ಪ್ರಹ್ಲಾದನು ಮೊರೆಯಿಟ್ಟಾಗ ಉಗ್ರನರಸಿಂಹನು ಲಕ್ಷ್ಮೀನರಸಿಂಹನಾದ ಘಟ್ಟ ನಮಗೆ ಪ್ರತ್ಯಕ್ಷ ಪ್ರಮಾಣಗಳು.

ಹೀಗೆ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಆಚಾರ್ಯರ ಅನುಗ್ರಹ, ಲಕ್ಷ್ಮೀದೇವಿಯ ಪುರುಷಕಾರ (ಶಿಫಾರಸ್ಸು) ಭಗವಂತನಲ್ಲಿ ಅನನ್ಯ ಶರಣಾಗತಿ ಮುಖ್ಯವಾಗಿ ಕಂಡುಬರುವ ಅಂಶಗಳಾಗಿವೆ. ಭಗವಂತ ತನ್ನ ಭಕ್ತರ ಉದ್ಧಾರಕ್ಕಾಗಿ ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾರೂಪಗಳಲ್ಲಿ ಕಂಗೊಳಿಸುತ್ತಾನೆ. ಆಳ್ವಾರರು ಅರ್ಚಾವತಾರವನ್ನು ಲೀಲಾವಿಭೂತಿಯೆಂದು ಕರೆದು 'ನಮಗೆ ದೃಷ್ಟಿಗೋಚರನಾಗಿ ಬಹಳ ಸುಲಭವಾಗಿ ಕಣ್ಣಿಗೆ ಕಾಣುವ ದೈವ ಇದೆ. ಅದನ್ನೇ ಅನನ್ಯ ಭಕ್ತಿಯಿಂದ ಭಜಿಸಿದರೆ ಸಾಕು' ಎಂಬುದಾಗಿ ಹೇಳಿದ್ದಾರೆ. "ವೈಷ್ಣವ ಆಚಾರಸೇವನಾತ್" ಎಂಬಂತೆ ಭಾಗವತರ ಕೈಂಕರ್ಯಕ್ಕೆ ಭಗವಂತ ಪೂರ್ಣವಾಗಿ ಮನಸೋಲುತ್ತಾನೆ. ಭಾಗವತರ ಪರಾಭವ ಆತ ಸಹಿಸಲಾರ. ದೂರ್ವಾಸರು ಹಾಗೂ ಅಂಬರೀಷರ ಕಥೆ ನಿದರ್ಶನವಾಗಿದೆ. ಲಕ್ಷ್ಮಣನಲ್ಲಿ ಸೀತಾಮಾತೆಯು ಮಾಡಿದ ಅಪರಾಧಕ್ಕೆ ರಾಮನಿಂದ ಪರಿತ್ಯಕ್ತಳಾಗಿ ಲಂಕಾವಾಸ ಮಾಡಬೇಕಾದ ಶಿಕ್ಷೆಯನ್ನೂ ಅನುಭವಿಸಬೇಕಾಯಿತು. ಶ್ರೀ ವೈಷ್ಣವ ಧರ್ಮದಲ್ಲಿ ಭಾಗವತರ ಅಪಚಾರ ಬಹು ಪಾಪಕರವಾದುದು. ವಿಶಿಷ್ಟಾದ್ವೈತಿಗಳಲ್ಲಿ ಸಾಧನಮಾರ್ಗದಲ್ಲಿ ತೆಂಗಲೆ ಹಾಗೂ ವಡಗಲೆ ಎಂಬುದಾಗಿ ಎರಡು ಬೇರೆ ಬೇರೆ ಪಂಗಡಗಳಿವೆ. ಶ್ರೀ ರಾಮಾನುಜರು ಹಾಕಿದ ಸಸಿ ಎರಡು ಕವಲುಗಳಲ್ಲಿ ಹೆಮ್ಮರವಾಗಿ ಬೆಳೆಯಿತು. ತೆಂಗಲೆ ಪಂಥಕ್ಕೆ ಪಿಳ್ಳೈ ಲೋಕಾಚಾರ್ಯರ ಮಾರ್ಜಾಲ ಕಿಶೋರ ನ್ಯಾಯದಂತೆ ಪ್ರಪನ್ನನಿಗೆ ಕರ್ಮಾನುಷ್ಠಾನ ಅಷ್ಟೇನೂ ಅವಶ್ಯಕವಲ್ಲ. ಪರಮಾತ್ಮನ ಕೃಪೆ ಭಕ್ತನ ಮೇಲೆ ಸದಾ ಇರುತ್ತೆ. ಸ್ವಪ್ರಯತ್ನವಿಲ್ಲದೆ ಆ ಕೃಪೆ ಅವನ ಮೇಲೆ ಇರುತ್ತೆ ಎಂಬುದಾಗಿ ಸಾಧಕನು ತಿಳಿಯಬೇಕು. ಬೆಕ್ಕು ತನ್ನ ಮರಿಯನ್ನು ಕಾಪಾಡುವ ರೀತಿ.

ಶ್ರೀ ವೈಷ್ಣವರ ಇನ್ನೊಂದು ಶಾಖೆಯ ಮುಖ್ಯ ಪ್ರವರ್ತಕರು ವೇದಾಂತ ದೇಶಿಕರು. ಇವರ ಕಾಲದಲ್ಲಿ ಶ್ರೀ ವೈಷ್ಣವ ಧರ್ಮವು ಸರ್ವತೋಮುಖವಾಗಿ ಬೆಳೆಯಿತು. ಇವರು ವಿದ್ಯಾರಣ್ಯ ಸಮಕಾಲೀನರು. ಇವರು

( 24ನೇ ಪುಟ ನೋಡಿ )

# ಯುವವಾಣಿ

# ಶ್ರೀಕೃಷ್ಣ ನಾಮಾಮೃತ



ಸರ್ವಶಾಸ್ತ್ರ ಶಿರೋಮಣಿಯಾದ ಶ್ರೀಮದ್ಭಾಗವತದ ಹಾಗೂ ಇತರ ಸಾತ್ವಿಕ ಪುರಾಣಗಳ ಪ್ರಮಾಣದಂತೆ, ನಾಲ್ಕು ಯುಗಗಳಲ್ಲಿ ಭಗವತ್ಪ್ರಾಪ್ತಿಯ ಸಲುವಾಗಿ ವಿಹಿತವಾಗಿರುವ ಯುಗಧರ್ಮಗಳು ಅನುಕ್ರಮವಾಗಿ,– ಕೃತಯುಗದಲ್ಲಿ ಭಗವಾನ್ ವಿಷ್ಣುವಿನ ಧ್ಯಾನ, ತ್ರೇತಾಯುಗದಲ್ಲಿ ತದೀಯಯಜ್ಞ, ದ್ವಾಪರಯುಗದಲ್ಲಿ ಭಗವಂತನ ಪರಿಚರ್ಯೆ ಹಾಗೂ ಕಲಿಯುಗದಲ್ಲಿ ಮುಖ್ಯವಾಗಿ ಶ್ರೀಹರಿಯ ನಾಮಸಂಕೀರ್ತನೆ. ವಿಶುದ್ಧವಾದ ಭಕ್ತಿಯ ಮೂಲಕವಾಗಿ ಅನುಕ್ಷಣವೂ ಶ್ರೀ ಕೃಷ್ಣನಾಮವು ಕೀರ್ತಿತವಾದಲ್ಲಿ ಶ್ರೀನಾಮದೊಂದಿಗೆ ಅಭಿನ್ನನಾದ ಸಾಕ್ಷಾತ್ ಭಗವಂತನು ಸಾಧಕನ ನಿರ್ಮಲವಾದ ಪ್ರೀತಿಗೆ ಒಲಿದು ಪರಮ ಪುರುಷಾರ್ಥವಾದ ಕೃಷ್ಣಪ್ರೇಮವನ್ನು ಆತನಿಗೆ ದಾನಗೈಯುವನು. ಶ್ರೀ ಶುಕದೇವರು ರಾಜಾ-ಪರೀಕ್ಷಿತರಿಗೆ ತಿಳಿಸಿರುವುದೇನೆಂದರೆ, – "ಹೇ ರಾಜನ್, ಕಲಿಯುಗವು ಸರ್ವವಿಧವಾದ ದೋಷಗಳಿಗೆ ಆಕರ ಸ್ವರೂಪವಾದುದಾಗಿದ್ದರೂ ಈ ಯುಗದ ಏಕಮಾತ್ರವಾದ ಮಹಾಗುಣವೇನೆಂದರೆ, ಮಾನವಮಾತ್ರರಾದವರು ಈ ಕಲಿಯುಗದಲ್ಲಿ ಶ್ರೀಕೃಷ್ಣನಾಮದ ವಿಶುದ್ಧವಾದ ಕೀರ್ತನೆಯ ಫಲವಾಗಿ ಮಾಯಾ ಬಂಧನದಿಂದ ಮುಕ್ತರಾಗಿ ಕೊನೆಗೆ ಪರಮಪುರುಷನ ಅನುಗ್ರಹಕ್ಕೆ ಪಾತ್ರರಾಗುವರು".

ಪದ್ಮಪುರಾಣದ ವಚನದಂತೆ, – ಚಿಂತಾಮಣಿ ಸ್ವರೂಪನಾದ ಶ್ರೀಕೃಷ್ಣ – ನಾಮವು ಸ್ವಯಂ ಕೃಷ್ಣನೂ, ಚೈತನ್ಯರಸ ವಿಗ್ರಹವೂ, ಪೂರ್ಣವೂ, ಮಾಯಾತೀತವೂ, ನಿತ್ಯಮುಕ್ತವೂ, ಆಗಿರುವುದು ; ಯಾಕೆಂದರೆ, ಭಗವಂತನ ನಾಮ ಹಾಗೂ ನಾಮಿ (ಭಗವದ್ವಿಗ್ರಹ) ಗಳಲ್ಲಿ ಯಾವವಿಧವಾದ ಭೇದವೂ ಇರುವುದಿಲ್ಲ. ಸಮಸ್ತ ಸನಾತನ ಶಾಸ್ತ್ರಗಳ ಸಾರಸರ್ವಸ್ವವಾದ ಭಗವನ್ನಾಮದ ಅಚಿಂತ್ಯ ಮಹಿಮೆಗಳು ಅನಂತವಾಗಿದ್ದು ಇವುಗಳನ್ನು ಶಾಸ್ತ್ರಗಳು ಸರ್ವತ್ರವಾಗಿ ಮುಕ್ತಕಂಠದಿಂದ ಘೋಷಿಸುತ್ತವೆ. ಇಂತಹ ದಿವ್ಯವಾದ ಭಗವನ್ನಾಮಗಳನ್ನು ಪ್ರೀತಿಯಿಂದ ಉಚ್ಚರಿಸುವವರು ಸಮಸ್ತ ಮಾನವರಲ್ಲಿ ಧನ್ಯರಾಗಿ ಅವರು ತ್ರಿಲೋಕಗಳನ್ನು ಪವಿತ್ರಗೊಳಿಸುವರು. ಭಗವಂತನ ಶ್ರೀಮುಖವಾಣಿಯಂತೆ,– "ಹೇ ನಾರದನೆ, ನಾನು ವೈಕುಂಠದಲ್ಲಿಯೂ, ಯೋಗಿಗಳ ಹೃದಯದಲ್ಲಿಯೂ ವಾಸಮಾಡುವವನಾಗಿಲ್ಲ, ನನ್ನ ಪ್ರೀತಿಪಾತ್ರರಾದ ಭಕ್ತರು ಯಾವೆಡೆಯಲ್ಲಿ ನನ್ನ ನಾಮ, ರೂಪ, ಗುಣ ಇತ್ಯಾದಿಗಳನ್ನು ಗಾನಗೈಯುವರೋ ಅಲ್ಲಿಯೇ ನಾನು ಅವಸ್ಥಿತನಾಗಿರುವೆನು".

ಪರಮೇಶ್ವರನೂ, ಸಚ್ಚಿದಾನಂದ ವಿಗ್ರಹನೂ, ಸರ್ವಕಾರ್ಯ ಕಾರಣನೂ ಆದ ಶ್ರೀಕೃಷ್ಣನು ವರ್ತಮಾನ ಯುಗದಲ್ಲಿ ಶ್ರೀಕೃಷ್ಣಚೈತನ್ಯನಾಗಿ ಆವಿರ್ಭವಿಸಿ, ಯುಗಧರ್ಮವಾದ ಶ್ರೀಕೃಷ್ಣನಾಮ ಸಂಕೀರ್ತನೆಯನ್ನು ಪುಣ್ಯಭೂಮಿಯಾದ ಭರತವರ್ಷದಲ್ಲೆಲ್ಲ ಪ್ರಚಾರಿಸಿ ಶ್ರೀಕೃಷ್ಣಪ್ರೇಮವನ್ನು ಜಗತ್ತಿಗೆ ದಾನಗೈದಿರುವನು. ಸಂಕೀರ್ತನ ಪಿತರಾದ ಶ್ರೀ ಚೈತನ್ಯರು ತಮ್ಮ ಸಮಸ್ತ ಉಪದೇಶಗಳ ಸಾರಸರ್ವಸ್ವವಾಗಿ 'ಶ್ರೀ ಶಿಕ್ಷಾಷ್ಟಕ'ವೆಂದು ಹೆಸರಾಗಿರುವ ಎಂಟು ಶ್ಲೋಕಗಳನ್ನು ರಚಿಸಿರುವರು. ಈ ಶಿಕ್ಷಾಷ್ಟಕದ ಪ್ರಥಮ ಶ್ಲೋಕವು ಚರಮ ಸಾಧನೆಯಾದ ಶ್ರೀಕೃಷ್ಣನಾಮ ಸಂಕೀರ್ತನೆಯನ್ನೂ, ಅದರ ಸಪ್ತವಿಧ ಮುಖ್ಯ ಫಲಗಳನ್ನೂ ನಿರ್ದೇಶಿಸುತ್ತದೆ,–

ಚೇತೋದರ್ಪಣ ಮಾರ್ಜನಂ ಭವಮಹಾ
ದಾವಾಗ್ನಿ ನಿರ್ವಾಪಣಂ
ಶ್ರೇಯಃಕೈರವ ಚಂದ್ರಿಕಾ ವಿತರಣಂ
ವಿದ್ಯಾವಧೂಜೀವನಮ್ ।
ಆನಂದಾಂಬುಧಿವರ್ಧನಂ ಪ್ರತಿಪದಂ
ಪೂರ್ಣಾಮೃತಾಸ್ವಾದನಂ
ಸರ್ವಾತ್ಮಸ್ನಪನಂ ಪರಂ ವಿಜಯತೇ
ಶ್ರೀಕೃಷ್ಣ ಸಂಕೀರ್ತನಮ್ ॥

'ಚಿತ್ತರೂಪವಾದ ದರ್ಪಣದ ಮಾರ್ಜನಕಾರಿಯೂ, ಸಂಸಾರರೂಪವಾದ ಮಹಾದಾವಾಗ್ನಿಯ ನಿರ್ವಾಪಣಕಾರಿಯೂ, ಜೀವಾತ್ಮರ ಶ್ರೇಯಃಸ್ವರೂಪವಾದ ಕುಮುದಪುಷ್ಪದ ಪ್ರತಿಯಾಗಿ ಚಂದ್ರಿಕಾ ವಿತರಣಕಾರಿಯೂ, ವಿದ್ಯೆಯೆಂಬ ವಧುವಿನ ಜೀವನಸ್ವರೂಪವೂ, ಶಾಶ್ವತವಾದ ಪರಮಾನಂದ ಸಮುದ್ರದ ವರ್ಧನಕಾರಿಯೂ, ಪ್ರತಿಯೊಂದು ಪದದ ಮೂಲಕವಾಗಿ ಪೂರ್ಣಾಮೃತದ ಆಸ್ವಾದನೆಯನ್ನು ನೀಡುವಂತಹದೂ ಹಾಗೂ ಜೀವರ ಸಮಸ್ತ ಸ್ವರೂಪವನ್ನು ಶೀತಲಗೊಳಿಸುವಂತಹದೂ ಆಗಿರುವ ಶ್ರೀಕೃಷ್ಣ ಸಂಕೀರ್ತನವು ವಿಶೇಷ ರೂಪವಾಗಿ ಜಯಯುಕ್ತವಾಗಲಿ.'

ಶ್ರೀ ಕೃಷ್ಣನಾಮ ಭಜನೆಯು ಏಕಕಾಲದಲ್ಲಿ ಸರ್ವಸುಲಭವೂ, ಅತ್ಯಂತ ದುರ್ಲಭವೂ ಆಗಿರುವುದು. ಸುಲಭವಾದ ಸಾಧನವಾಗಿರುವುದೇಕೆಂದರೆ, ವಾಕ್ಶಕ್ತಿಯುಳ್ಳ ಪ್ರತಿಯೊಬ್ಬ ನಿಷ್ಕಪಟ ಮಾನವರೂ ಶ್ರದ್ಧೆಯ ಉದಯವಾದಲ್ಲಿ ಹರಿನಾಮವನ್ನು ಉಚ್ಚರಿಸಬಲ್ಲರು. ಆದರೆ, ತ್ರಿಗುಣಾತೀತನಾದ ಶುದ್ಧಭಕ್ತಿಯ ಉದಯವಾಗದಿದ್ದಲ್ಲಿ ಹರಿನಾಮೋಚ್ಚಾರಣೆಯ ಮುಖ್ಯ ಫಲಗಳನ್ನು ಇತರ ಯಾವ ಉಪಾಯಗಳಿಂದಲೂ ಗಳಿಸಲಾಗುವುದಿಲ್ಲ. ಅಹೈತುಕವೂ, ಅಪ್ರತಿಹತವೂ ಆದ ಈ ಶುದ್ಧಭಕ್ತಿಯು, ಮೂಲೋಕದಲ್ಲಿ ಅತ್ಯಂತವಾಗಿ ಗೋಪನೀಯವೂ, ದುರ್ಲಭವೂ ಆಗಿರುವುದು. ನಾಮೋಚ್ಚಾರಣೆಯ ಸಮಯದಲ್ಲಿ ದಶವಿಧವಾದ ನಾಮಾಪರಾಧಗಳನ್ನು ವರ್ಜಿಸಬೇಕಾದುದೂ ಸಾಧಕನ ಏಕಾಂತವಾದ ಕರ್ತವ್ಯವಾಗಿದೆ. ಕರ್ಮವೇ ಜೀವಾತ್ಮರ ದೇಹಧರ್ಮರೂಪವೂ, ಜ್ಞಾನವು ಮನೋಧರ್ಮ

( 23 ನೇ ಪುಟ ನೋಡಿ )

ಶ್ರೀ ನರಸಿಂಹ ಬ್ರಹ್ಮಚಾರಿ

# ನರಸಿಂಹ ಸುಪ್ರಭಾತ

ಶ್ರೀ ಎನ್. ರಂಗನಾಥ್

ಶ್ರೀ ಲಕ್ಷ್ಮೀ ನೃಸಿಂಹ ಪರಬ್ರಹ್ಮ ನಮಿಸುತಿಹೆ
ಸಂಧ್ಯೆಯವತಾರದಲಿ ಮೂಡಿ ಬಾರಾ
ಪ್ರಹ್ಲಾದವರ ಪ್ರಭುವೆ ಎದ್ದೇಳು ಗರ್ಜಿಸು
ಅವತಾರ ಸಂಧ್ಯೆಯು ನಿನಗೆ ನರಸಿಂಹ 1

ಹಿರಣ್ಯಕಶಿಪುವಿನ ಉದರ ಸೀಳಿದ ವಂಸೆ
ಪ್ರಹ್ಲಾದ ವರಪ್ರದನೆ ನಾರಸಿಂಹ
ರಾಕ್ಷಸರ ಭಂಜಿಸಿದ ನರಸಿಂಹ ದೇವನೇ
ಅವತಾರ ಸಂಧ್ಯೆಯು ನಿನಗೆ ನರಸಿಂಹ 2

ಏಳಯ್ಯ ದನುಜದರ್ಪದ ವೈರಿ ನರಸಿಂಹ
ಕೋಗಿಲಗಳುಲಿವು ತಾ ಬರುತಲಿಹುದು
ತಂಗಾಳಿ ಬೀಸುತಿದೆ ತಿರುಮಂತ್ರ ಜಪಿಸುತಿವೆ
ದುಂಬಿಗಳು – ಅವತಾರ ಸಂಧ್ಯೆಯು ನರಸಿಂಹ 3

ಪ್ರಹ್ಲಾದ ನೊಂದಾಗ ಅಭಯ ಹಸ್ತವನಿತ್ತೆ
ಹಸುಳೆ ಕರೆ ಕೇಳ್ದೊಡನೆ ಬಂದೆ ಜವದಿ
ಭರದಿ ತಕ್ಕೈಸಿ ಅವಗಿತ್ತೆ ದರ್ಶನ ಫಲವ
ಅವತಾರ ಸಂಧ್ಯೆಯು ನಿನಗೆ ನರಸಿಂಹ 4

ದುರುಳ ರಕ್ಕಸ ಗದೆಯ ಹಿಡಿದು ಕಂಬಕೆ ಜಡಿದ
ತೋರಿಸವನಿಹನೆ ಎಂದೆಲ್ಲ ಜರಿದ
ಪ್ರಹ್ಲಾದ ಕರಮುಗಿದು ಬಾರ ತಂದೇ ಎಂದ
ಅವತಾರ ಸಂಧ್ಯೆಯು ನಿನಗೆ ನರಸಿಂಹ 5

ಆಕಾಶ ಭೂಮಿಗಳನೊಂದು ಮಾಡುವ ಶಬ್ದ
ಭೋರ್ಗರೆದು ಪರ್ವತಗಳಾಡಿದಾಗ
ಒಡಮೂಡಿದಾ ದೇವ ನರಸಿಂಹ ಏಳಯ್ಯ
ಅವತಾರ ಸಂಧ್ಯೆಯು ನನಗೆ ನರಸಿಂಹ 6

ಭಕ್ತ ಪ್ರಹ್ಲಾದನಿಗೆ ವರವಿತ್ತ ನರಸಿಂಹ
ಕಾರುಣ್ಯ ಮೂರುತಿಯೆ ಎದ್ದು ಬಾರಾ
ಭಕ್ತ ಜನ ಕಳಕಳಿಸಿ ಕರೆಯುತ್ತಲಿಹರಯ್ಯ
ಅವತಾರ ಸಂಧ್ಯೆಯು ನಿನಗೆ ನರಸಿಂಹ 7

ನರವೃಂದ ಪಾಪದಲಿ ಬೆಂದು ನೊಂದಿದೆ ದೇವ
ಉದ್ಧರಿಸು ಮಾನವರ ತಪ್ಪ ಮನ್ನವ
ವಾತ್ಸಲ್ಯಮೂರುತಿಯೆ ಮಮದೇವ ಜಗದೊಡೆಯ
ಅವತಾರ ಸಂಧ್ಯೆಯು ನಿನಗೆ ನರಸಿಂಹ 8

ತ್ರೇತಾಯುಗದೆ ರಾಮನಾದೆಲೆ ದೇವ
ದ್ವಾಪರದಿ ಮುರಳೀ ಕೃಷ್ಣನಾದೆ
ನೀನೆ ಭಾರ್ಗವನಾದೆ ಅಮರದೇವಾಧೀಶ
ಅವತಾರ ಸಂಧ್ಯೆಯು ನಿನಗೆ ನರಸಿಂಹ 9

ಬೃಂದಾವನದ ಶ್ರೀರಾಘವೇಂದ್ರಗೆ ಒಲಿದೆ
ಭೂತ ಪ್ರೇತಗಳಟ್ಟಿ ಜನರಕಾಯ್ದೆ
ಬಕುತ ಜನ ಕರಮುಗಿದು ನಿಂತಿಹರು ಮಮದೇವ
ಅವತಾರ ಸಂಧ್ಯೆಯು ನಿನಗೆ ನರಸಿಂಹ 10

ಕದಿರಿಯಲಿ ನೆಲಸಿರುವೆ ನುಗ್ಗಹಳ್ಳಿಯಲಿರುವೆ
ಬೆಂಗಳೂರಿನ ಬಳಿಯ ಪೇಟೆಯಲ್ಲಿ
ಹಂಪೆಯಲಿ ನೆಲಸಿರುವ ಉಗ್ರನರಸಿಂಹನೇ
ಅವತಾರ ಸಂಧ್ಯೆಯು ಹೇ ನಾರಸಿಂಹ 11

ತಿರುಪತಿಯ ತಿಮ್ಮಪ್ಪ ಶ್ರೀರಂಗದಾ ರಂಗ
ಶ್ರೀರಂಗಪಟ್ಟಣದ ರಂಗನಾಥ
ಯದುಗಿರಿಯ ನರಸಿಂಹ ಹಂಪೆಯಾ ಶ್ರೀರಾಮ
ಅವತಾರ ಸಂಧ್ಯೆಯು ನಿನಗೆ ನರಸಿಂಹ 12

ಜಗ ಸೃಷ್ಟಿಗೈದವನೆ ನರಕೋಟಿ ನರಹರಿಯೆ
ತೊರವೆಯಲಿ ನೆಲಸಿರುವ ಭಕ್ತಪ್ರಿಯ
ಬಾರಯ್ಯ ತಾರಕನೆ ಗಾಯತ್ರಿ ಜಪಿಸುತಿಹೆ
ಅವತಾರ ಸಂಧ್ಯೆಯು ನಿನಗೆ ನರಸಿಂಹ 13

ಉಗ್ರರೂಪೀ ದೇವ ಭಕ್ತರಾ ವತ್ಸಲನೆ
ದುರ್ಜನರ ಶಿಕ್ಷಿಪನೆ ಶಿಷ್ಟರಕ್ಷಾ
ಸೀತಿಯಲಿ ನೆಲಸಿರುವ ನರಹರಿಯೆ ಬಾರಯ್ಯ
ಅವತಾರ ಸಂಧ್ಯೆಯು ನಿನಗೆ ನರಸಿಂಹ 14

ಮಾರೆಹಳ್ಳಿಯ ದೇವ ಭಕ್ತಜನ ನಿಂತಿಹರು
ಉದ್ಧರಿಸಲೇಳಯ್ಯ ನರಸಿಂಹ
ದೇವರಾಯನ ದುರ್ಗದಲಿ ನೆಲಸಿಹ ಬಂಧು
ಅವತಾರ ಸಂಧ್ಯೆಯು ನಿನಗೆ ನರಸಿಂಹ 15



ಸಾವನ ದುರ್ಗದಲಿ ವಿಕಟಾಟವಿಯಲ್ಲಿ
ನೆಲಸಿರುವ ನರಹರಿಯೆ ದೀನ ಬಂಧು
ಭಕ್ತ ಪ್ರಹ್ಲಾದನನು ರಕ್ಷಿಸಿದ ಕರುಣಾಳು
ಅವತಾರ ಸಂಧ್ಯೆಯು ನಿನಗೆ ನರಸಿಂಹ 16

ಮುಳಬಾಗಿಲಾ ಶ್ರೀ ನರಸಿಂಹ ಕ್ಷೇತ್ರದಲಿ
ವಿಹರಿಸುತ ನಿಂತಿರುವ ನರಸಿಂಹ
ಶ್ರೀಪಾದರಾಜರಿಗೆ ಕರುಣಿಸಿದ ಮಮದೇವ
ಅವತಾರ ಸಂಧ್ಯೆಯು ನಿನಗೆ ನರಸಿಂಹ 17

ಅಹೋಬಿಲದಿ ನೆಲಸಿರುವ ಲಕುಮಿಪತಿ ನರಸಿಂಹ
ಏಳಯ್ಯ ಬಾರಯ್ಯ ನಾರಾಯಣಾ
ಮುಕ್ಕೂರು ಕ್ಷೇತ್ರದಾ ಯತಿವರ್ಯ ಷಡಗೋಪ
ರಂಗನಾಥರ ಪೂಜೆಕೊಳುವಾ ದೇವ 18

ಹತ್ಯಾಳು ನರಸಿಂಹ ನಾಗಮಂಗಲದಲಿಹೆ
ಗುಂಜಾನರಸಿಂಹ ಬಾರ ಪ್ರಭುವೆ
ಹೊಳೆಯ ನರಸೀಪುರದ ನರಸಿಂಹ ಬಾರಯ್ಯ
ಅವತಾರ ಸಂಧ್ಯೆಯು ನಿನಗೆ 19

ಏಳಯ್ಯ ಲಕ್ಷ್ಮೀನೃಸಿಂಹ ಮಮದೇವ
ದಿವ್ಯರಾಮಾನುಜರ ಇಷ್ಟ ದೈವ
ಯತಿರಾಜರನು ದಯದಿ ಕಂಡು ಹರಸಿದೆ ನೀನು
ಅವತಾರ ಸಂಧ್ಯೆಯು ನಿನಗೆ ನರಸಿಂಹ 20

ನರಸಿಂಹಾ ಬಾರ ದಿವ್ಯಸಿಂಹಾ ಏಳು
ಉಗ್ರಸಿಂಹನೆ ನೋಡು ಉಗ್ರನೇತ್ರಾ
ಬಾರ ಯೋಗಾನಂದ ಬಾರಾ ಪಂಚಾನನನೇ
ಅವತಾರ ಸಂಧ್ಯೆಯು ನಿನಗೆ ನರಸಿಂಹ 21

ಜ್ವಾಲಮಾಲಿಯೆ ಬಾರ ನಾರಸಿಂಹನೆ ಕೋರ
ಬಾರಯ್ಯ ನರಸಿಂಹ ಬಾರ ದೇವ
ಮಹದಂಷ್ಟ್ರಯುತ ದೇವ ನಾರಸಿಂಹನೆ ಏಳು
ಅವತಾರ ಸಂಧ್ಯೆಯು ನಿನಗೆ ನರಸಿಂಹ 22

ಕರಮುಗಿವೆ ಬಾರಯ್ಯ ವಿಷ್ಣು ಪುರುಷೋತ್ತಮನೆ
ವನಮಾಲಿ ದಯೆ ತೋರು ದೈತ್ಯದೂರ
ಪ್ರಹ್ಲಾದವರ ನೀನು ವಜ್ರನಖ ವಿಕರಾಳ
ಅವತಾರ ಸಂಧ್ಯೆಯು ನಿನಗೆ ನರಸಿಂಹ 23

ನಿಟಿಲಾಕ್ಷ ನೀನಯ್ಯ ಸಾಸಿರಾಕ್ಷನು ನೀನು
ವಜ್ರದಂಷ್ಟ್ರನೆ ನನ್ನ ಕುಲದ ದೈವ
ಗುಣಭದ್ರ ಮಹಭದ್ರ ಬಲಭದ್ರ ನಂಸಿಂಹ
ಅವತಾರ ಸಂಧ್ಯೆಯು ನಿನಗೆ ನರಸಿಂಹ 24

ಸರ್ವಮಂತ್ರಗಳ ರೂಪ ಭೂತ ಪ್ರೇತಾರಿ ನೀ
ಬಾರಯ್ಯ ಪುಣ್ಯಾತ್ಮ ಹೇ ನಾರಸಿಂಹ
ಶರಣ ವತ್ಸಲ ನೀನು ಶ್ರೀನಿವಾಸನೆ ಬಾ
ಅವತಾರ ಸಂಧ್ಯೆಯು ನಿನಗೆ ನರಸಿಂಹ 25

ಜಗದ ಪಾಲಕ ನೀನು ಸಚ್ಚಿದಾನಂದನೇ
ಲಕ್ಷ್ಮೀನರಸಿಂಹ ದೇವ ಬಾರ
ಚಂಡ ವಿಕ್ರಮ ಹರಿಯೆ ಜ್ವಾಲೆಯ ನರಸಿಂಹ
ಅವತಾರ ಸಂಧ್ಯೆಯು ನಿನಗೆ ನರಸಿಂಹ 26

ಹಿರಣ್ಯಕಶಿಪುವಿನ ಉದರ ಸೀಳಿದ ಧೀರ
ಕರುಳ ಮಾಲೆಯ ಧರಿಸಿ ನಡೆದ ಹರಿಯೆ
ಹಸುಳೆ ಪ್ರಹ್ಲಾದನಿಗೆ ಅಭಯ ನೀಡಿದ ಹರಿಯೆ
ಅವತಾರ ಸಂಧ್ಯೆಯು ನಿನಗೆ ನರಸಿಂಹ 27

ಸಿಂಹಾಚಲದ ಸಿರಿಗಾಳಿ ಬೀಸುತಲಿಹುದು
ಕಂಪಾಗಿ ಆಲಯದ ಸನಿಹದಲ್ಲಿ
ಬಾ ವರದ ನರಸಿಂಹ ಜನಮನವನೆಚ್ಚರಿಸು
ಅವತಾರ ಸಂಧ್ಯೆಯು ನಿನಗೆ ನರಸಿಂಹ 28

ದುಷ್ಟರಿಹರಲ್ಲಲ್ಲಿ ಭೂವ್ಯಾಕಾಶಗಳ
ಅಳೆದು ನಿಲ್ ಉಗ್ರದಲಿ ಮೆಟ್ಟನಿಂತು
ಶಿಷ್ಟ ಸಂದೋವಹನು ಕಾಪಾಡು ಹೇ ದೇವ
ಅವತಾರ ಸಂಧ್ಯೆಯು ನಿನಗೆ ನರಸಿಂಹ 29

ಬಡವರಿಗೆ ನೀ ಬಂಧು ದಿವ್ಯಸಾರದ ಮಂತ್ರ
ತವನಾಮ ಜಪಿಸುತಿಹೆ ರಕ್ಷಿಸಯ್ಯ
ಕೃಷ್ಣಾವತಾರದಲಿ ದ್ರೌಪದಿಯ ತಾರಿಸಿದೆ
ಅವತಾರ ಸಂಧ್ಯೆಯು ನಿನಗೆ ನರಸಿಂಹ 30

ಅಜಮಿಳನ ಕಾಯ್ದವನೆ ಲಕ್ಷ್ಮೀಪತಿ ನರಹರಿಯೆ
ಗಜ ಬೇಡಿ ಕರೆದಾಗ ಕಾಯ್ದ ಬಂಧು
ನೀನೆ ರಕ್ಷಕನೆಮಗೆ ಬಾ ದೇವ ಮಮ ಬಂಧು
ಅವತಾರ ಸಂಧ್ಯೆಯು ನಿನಗೆ ನರಸಿಂಹ 31

ಲಕ್ಷ್ಮೀಪ್ರಿಯ ನರಸಿಂಹ ವಾಮನನೆ ಜಗದಪಿತ
ರಾಮಚಂದ್ರನೆ ಬಾರ ಕಾಮಪಿತನೆ
ಕೇಳಸದೆ ಆರ್ತದನಿ ಭಕ್ತರಾ ಕಾತರವು
ಅವತಾರ ಸಂಧ್ಯೆಯು ನಿನಗೆ ನರಸಿಂಹ 32

ಹಕ್ಕಿಗಳ ಕೂಜನದಿ ನಿನ್ನ ಧ್ಯಾನದ ಸೊಗಡು
ಗೋವುಗಳ ನಡಿಗೆಯಲಿ ನಿನ್ನ ಬೆಡಗು
ಮಂದ ಮಾರುತದಲ್ಲಿ ನಿನ್ನದೇ ಹುಸಿನಗೆಯು
ಅವತಾರ ಸಂಧ್ಯೆಯು ನಿನಗೆ ನರಸಿಂಹ 33

ಮೂಲೋಕದುಚ್ಛ್ವಾಸ ನಿಶ್ವಾಸ ನೀನಿರುವೆ
ನನಗೆ ತಾರಕ ಮಂತ್ರವಿತ್ತ ಗುರುವೆ
ರಾಮಾನುಜಾಚಾರ್ಯ ಆಂಡಾಳ ದೇವಿಯರ
ಆರಾಧ್ಯ ನೀನಯ್ಯ ನಾರಸಿಂಹ 34

ಸಮತೆ ನೆಲಸಿಲಿಕೆಂದೆ ಗೀತೆಯನು ಬೋಧಿಸಿದೆ
ಶಾಂತಿಕ್ಷೇಮದ ಸಂಹಿತೆಯಿತ್ತು ನಡೆದೆ
ಕ್ರಾಂತಿ ಕಹಳೆಯನೂದಿ ಶಾಂತಿ ಮಂತ್ರವನಿತ್ತೆ
ಅವತಾರ ಸಂಧ್ಯೆಯು ನಿನಗೆ ನರಸಿಂಹ 35

ಬಾರಯ್ಯ ನರಸಿಂಹ ವೇದ ಘೋಷದ ಶಬ್ದ
ಇಂಪಾಗಿ ಬರುತಲಿದೆ ಭಕ್ತರಿಂದ
ತವಸ್ತುತಿಯ ಗೈದಿಹರು ವೈದಿಕರು ಎಡೆಬಿಡದೆ
ಅವತಾರ ಸಂಧ್ಯೆಯು ನಿನಗೆ ನರಸಿಂಹ 36

ಶೋಳಿಂಗಪುರದ ವರ ಅಮರ ದೇವನೆ ಬಾರ
ತಿರುಪಾಲ್ ಕಡಲಿನಾ ರಂಗನಾಥಾ
ಗೋದೆ ತಾ ಕರಮುಗಿದು ಮಾಲೆಯೊಡನಿಹಳಲ್ಲಿ
ಅವತಾರ ಸಂಧ್ಯೆಯು ನಿನಗೆ ನರಸಿಂಹ 37

ಹಿರಣ್ಯ ಕಶಿಪುವಿನ ವಧೆಯ ಗೆಯ್ಯಲಿಕೆಂದು
ಅವತರಿಸಿ ಬಂದೆ ಹೇ ಭಕ್ತಪ್ರಿಯ
ನರಸಿಂಹ ಭೂಮಿಯಿಂದಾಗಸಕೆ ನೀ ಬೆಳೆದೆ
ಅವತಾರ ಸಂಧ್ಯೆಯು ನಿನಗೆ ನರಸಿಂಹ 38

ಬಡಜನತೆ ನೊಂದಿಹುದು ಬೆಂದಿಹುದು ಬಡತನದಿ
ಶೋಷಣೆಗೆ ಸಿಲುಕಿಹರು ಭಕ್ತರಿಂದು
ಮತ್ತೊಮ್ಮೆ ಅವತರಿಸಿ ಬಾರಯ್ಯ ನರಸಿಂಹ
ಅವತಾರ ಸಂಧ್ಯೆಯು ನಿನಗೆ ನರಸಿಂಹ 39

ವಿಶ್ವವಿದೆ ತತ್ತರಿಸಿ ಕಷ್ಟದಲಿ ಅರಚುತಿದೆ
ದಿಕ್‌ದಿಗಂತಗಳನ್ನು ಆಳೆದು ಬಾರ
ಮನುಜದಲ್ಲಿರುವ ದುಷ್ಟತೆಯ ಸಿಗಿದುಯ್ಯು
ಸ್ವಾತಿಕತೆ ನಿಲಿಸೇಳು ಲಕ್ಷ್ಮೀನೃಸಿಂಹ 40

ಮಂಗಳವು ನರಸಿಂಹ ಲಕ್ಷ್ಮೀಪತಿಯೇ ನಿನಗೆ
ಆನಂದಮಯನೇ ಶುಭಮಂಗಳ
ಜಗದಿ ನೆಲಸಲಿ ದೇವ ಮಂಗಳವು ಅನವರತ
ಮಂಗಳವದಾಗಲೀ ಶುಭಮಂಗಳ 41

ವೈದಿಕರು ಹಾಡಿಹರು ಮಂಗಳದ ಗೀತೆಯನು
ಋಗ್ವೇದ ನಿನ್ನನೇ ಝೇಂಕರಿಸಿದೆ
ಋಗ್ವೇದ ಯಜುರ್ ವೇದ ಸಾಮವೇದಾದಿಗಳು
ನಳನಳಿಸಿ ತಲೆದೂಗಿ ಬರುತಲಿಹವು 42

ಲಕ್ಷ್ಮೀನರಸಿಂಹ ಮಂಗಳವು ಜನಕಾಗಿ
ವಿಶ್ವದೊಳು ನೆಲಸಿರಲಿ ಶಾಂತಿಯಮೃತವು
ಸರ್ವಜನ ಸುಖದಲ್ಲಿ ಕೂಡಿರಲಿ ಬಾಳಿನಲಿ
ಒಸರು ಸಮೃದ್ಧಿಯಮೃತ ನಿರತ 43 ★

( 20ನೇ ಪುಟದಿಂದ )

ರೂಪವೂ ಆಗಿದ್ದು, ಭಗವದ್ಭಕ್ತಿಯು ನಿರ್ಮಲವಾದ ಆತ್ಮಧರ್ಮವಾಗಿದೆ. ಈ ಶುದ್ಧ ಭಕ್ತಿಯ ಆರು ವಿಧವಾದ ಲಕ್ಷಣಗಳು ಯಾವುವೆಂದರೆ, ೧) ಕ್ಲೇಶಘ್ನೀ—ಪಾಪ, ಪಾಪಬೀಜ ಹಾಗೂ ಅವಿದ್ಯೆಯೆಂಬ ತ್ರಿವಿಧ ಕ್ಲೇಶಗಳನ್ನು ನಾಶಗೊಳಿಸುವುದು, ೨) ಮೋಕ್ಷ ಲಘುತಾಕೃತ್—ಭಕ್ತಿಯನ್ನು ಹೊಂದಿದ ಮಾನವರು ಮೋಕ್ಷಸುಖಕ್ಕಿಂತಲೂ ಅನಂತಗುಣ ಶ್ರೇಷ್ಠವಾದ ಭಕ್ತಿಸುಖವನ್ನು ಅನುಭವಿಸುವರು, ೩) ಶುಭದಾ — ಜಗತ್ತಿನಲ್ಲಿರುವ ಸಮಸ್ತ ಶುಭಫಲಗಳನ್ನು ಭಕ್ತಿಯು ಸಹಜವಾಗಿ ದಾನಗೈಯುವ ಶಕ್ತಿಯಿಂದ ಕೂಡಿರುವುದು, ೪) ಸುದುರ್ಲಭಾ—ಮಾನವರು ಯಜ್ಞಾದಿ ಪುಣ್ಯಕರ್ಮಗಳಿಂದ ಭೋಗಸುಖವನ್ನೂ ಅನಾಯಾಸವಾಗಿ ಲಾಭಗಳಿಸಿದರೂ ಈ ರೀತಿಯಾದ ಅಸಂಖ್ಯಸಾಧನಗಳಿಂದಲೂ ಹರಿಭಕ್ತಿಯನ್ನು ಸಹಜವಾಗಿ ಗಳಿಸಲಾಗುವುದಿಲ್ಲ. ತಂತ್ರ ಶಾಸ್ತ್ರದ ಮಾತಿನಂತೆ,—

ಜ್ಞಾನತಃ ಸುಲಭಾ ಮುಕ್ತಿ
ರ್ಭುಕ್ತಿರ್ಯಜ್ಞಾದಿ ಪುಣ್ಯತಃ ।
ಸೇಯಂ ಸಾಧನಸಾಹಸ್ರೈ
ರ್ಹರಿಭಕ್ತಿಃ ಸುದುರ್ಲಭಾ ॥

ಚಿತ್ತತ್ವದ ಸ್ವರೂಪಜ್ಞಾನ ಪ್ರಾಪ್ತಿಯೇ ಭಜನೋನ್ನತಿಯ ಏಕಮಾತ್ರವಾದ ಹೇತುವಾಗಿದೆ. ಜೀವಾತ್ಮರು ಭಕ್ತಿಯನ್ನು ಕೇವಲವಾಗಿ ಭಗವಂತನ ಸ್ವರೂಪಶಕ್ತಿಯ ಕೃಪೆಯಿಂದಲೇ ಪಡೆಯಬಲ್ಲರು. ಸ್ವರೂಪಶಕ್ತಿಯ ಸಂಬಿತ್—ವೃತ್ತಿಯೂ, ಹ್ಲಾದಿನೀವೃತ್ತಿಯೂ ಏಕೀಭೂತವಾಗಿ ಭಕ್ತಿಶಕ್ತಿಯು ಉದ್ಭೂತವಾಗುವುದು. ಈ ಭಕ್ತಿಶಕ್ತಿಯನ್ನು ಇತರ ಶುದ್ಧ ಭಕ್ತರ ಕೃಪೆಯಿಂದ ಗಳಿಸಿದವರೇ ಹರಿಭಕ್ತಿಯನ್ನು ಆಚರಿಸಲು ಯೋಗ್ಯರಾಗಿರುವರು. ಬೃಹನ್ನಾರದೀಯ ಪುರಾಣದ ವಚನದಂತೆ,—

ಭಕ್ತಿಸ್ತು ಭಗವದ್ಭಕ್ತಸಂಗೇನ ಪರಿಜಾಯತೇ।
ಸತ್ಸಂಗಃ ಪ್ರಾಪ್ಯತೇ ಪುಂಭಿಃ ಸುಕೃತೈಃ
ಪೂರ್ವ ಸಂಚಿತೈಃ ॥

'ಭಗವದ್ಭಕ್ತರ ಸಂಗಪ್ರಭಾವದಿಂದಲೇ ಭಕ್ತಿವೃತ್ತಿಯು ಉದಿತವಾಗುವುದು. ಪೂರ್ವ ಸಂಚಿತವಾದ ಸುಕೃತಿಗಳ ಫಲಗಳು ಪುಂಜೀಭೂತವಾದಲ್ಲಿ ಮಾನವರು ಶುದ್ಧ ಭಕ್ತರ ಸಂಗವನ್ನು ಗಳಿಸುವರು.'

ಮೇಲೆ ಸೂಚಿಸಿದ ನಾಲ್ಕು ಲಕ್ಷಣಗಳು, ೫) ಸಾಂದ್ರಾನಂದ ವಿಶೇಷ ಸ್ವರೂಪ ಹಾಗೂ ೬) ಶ್ರೀ ಕೃಷ್ಣಾಕರ್ಷಿಣೀ.

ಸಾಧನ ಭಕ್ತಿಯು 'ವೈಧೀ' ಹಾಗೂ 'ರಾಗಾನುಗಾ' ಎಂದು ಎರಡು ವಿಧವಾಗಿದ್ದು ಶಾಸ್ತ್ರಗಳು ಸಾಧನ ಭಕ್ತಿಯ ಅಸಂಖ್ಯವಾದ ಅಂಗಗಳನ್ನು ಸೂಚಿಸುತ್ತವೆ. ಸಕಲ ವಿಧವಾದ ಭಕ್ತ್ಯಂಗಗಳಲ್ಲಿ ಶ್ರೀನಾಮಸಂಕೀರ್ತನವು ಶ್ರೇಷ್ಠತಮವಾದುದಾಗಿದೆ. ಮಂತ್ರ ಜಪವು ಕೇವಲವಾಗಿ ಮನಸ್ಸಿನಿಂದ ಸಾಧಿತವಾಗುವುದು ಹಾಗೂ ಜಪಕಾರಿಯಾದ ವ್ಯಕ್ತಿಯು ಮಾತ್ರವೇ ಜಪದ ಫಲವನ್ನು ಲಾಭಗಳಿಸುವನು. ಆದರೆ, ತುಟಿಗಳ ಸ್ಪಂದನದ ಮೂಲಕವಾಗಿ ಭಗವನ್ನಾಮವು ಕೀರ್ತಿತವಾದಲ್ಲಿ ಇದರಿಂದಾಗಿ ಅದನ್ನು ಶ್ರವಣ ಮಾಡುವವರೂ ಶ್ರೇಯಸ್ಸನ್ನು ಗಳಿಸುವರು. ಸಮ್ಯಕ್ ಕೀರ್ತನ ಅಥವಾ ಸರ್ವತೋಭಾವದ ಕೀರ್ತನೆಯು ಸಂಕೀರ್ತನವೆಂದು ತಿಳಿಯಲ್ಪಡುವುದು. ನಾಮಸಂಕೀರ್ತನೆಯು ಸುಷ್ಠುಭಾವದಿಂದ ನಡೆದಲ್ಲಿ ಇತರ ಸಾಧನಾಂಗಗಳ ಸಹಾಯದ ಆವಶ್ಯಕತೆಯಿರುವುದಿಲ್ಲ. ಜಾಗತಿಕ ವಿಷಯಗಳು ಕೀರ್ತಿತವಾದಲ್ಲಿ ಅವುಗಳು ಜಾಗತಿಕ ಕರ್ಮಭೋಗಗಳನ್ನು ಫಲರೂಪವಾಗಿ ಒದಗಿಸುತ್ತವೆ ಆದರೆ, ಬ್ರಹ್ಮಾಂಡಾತೀತವಾದ ಅಪ್ರಾಕೃತ ಭಗವದ್ರಾಜ್ಯದಲ್ಲಿ ಶ್ರೀಕೃಷ್ಣನೇ ಏಕಮಾತ್ರವಾದ ವಿಷಯ ವಸ್ತುವಾಗಿದ್ದು, ಪ್ರಕೃತಿಗೆ ಅತೀತವಾದ ಸಕಲ ಸಿದ್ಧಿಗಳು ಶ್ರೀಕೃಷ್ಣ ನಾಮ ಸಂಕೀರ್ತನೆಯ ಫಲವಾಗಿ ಲಭ್ಯವಾಗುವುವು. ಈ ಸಮಸ್ತ ಸಿದ್ಧಿಗಳಲ್ಲಿ ಏಳುವಿಧವಾದವುಗಳು ವಿಶೇಷವಾಗಿದ್ದು ಇವುಗಳೇ ಶ್ರೀ ಶಿಕ್ಷಾಷ್ಟಕದ ಪ್ರಥಮ ಶ್ಲೋಕದಲ್ಲಿ ಉದಾಹೃತವಾಗಿವೆ.

ಶ್ರೀಕೃಷ್ಣ ಸಂಕೀರ್ತನವು ಮೊದಲಿಗೆ ಜೀವರ ಮಲಿನವಾಗಿರುವ ಚಿತ್ತದರ್ಪಣಗಳನ್ನು ಉಜ್ವಲಗೊಳಿಸುವುದು. ಭಗವದ್ವೈಮುಖರೂಪವಾದ ಅನ್ಯಾಭಿಲಾಷೆ, ಫಲಭೋಗವಾಂಛೆ ಹಾಗೂ ಫಲ ತ್ಯಾಗ ಸ್ಪೃಹೆ — ಈ ಮೂರುವಿಧವಾದ ಪ್ರಾಕೃತ ಕಲುಷಗಳಿಂದ ಬದ್ಧಜೀವರ ಚಿತ್ತಗಳು ಪೂರ್ಣವಾಗಿ ಆವೃತವಾಗಿರುವವು. ಇವುಗಳು ಜೀವಾತ್ಮರ ಚಿತ್ತರೂಪ ದರ್ಪಣದಲ್ಲಿ ಜೀವ ಸ್ವರೂಪವನ್ನು ಪ್ರತಿಫಲಿತಗೊಳ್ಳದಂತೆ ಆವರಣ

ರೂಪನಾಗಿ ಬಾಧೆಯನ್ನು ನೀಡುತ್ತವೆ. ಕೈತವ ರೂಪವಾದ ಈ ಆವರಣಗಳನ್ನು ನಿಶ್ಚಯವಾಗಿಯೂ ಮುಕ್ತಗೊಳಿಸುವ ಏಕಮಾತ್ರವಾದ ಪ್ರಧಾನ ಉಪಕರಣವು ಶ್ರೀಕೃಷ್ಣ ಸಂಕೀರ್ತನವಾಗಿರುವುದು. ಸಮ್ಯಕ್ ರೂಪದಲ್ಲಿ ಶ್ರೀಕೃಷ್ಣ ಸಂಕೀರ್ತನವನ್ನು ಗೈಯುತ್ತ ಜೀವಾತ್ಮರು ತಮ್ಮ ಚಿತ್ತ ಮುಕುರಗಳಲ್ಲಿ ಶ್ರೀಕೃಷ್ಣ ದಾಸ್ಯದ ನಿತ್ಯೋಪಲಬ್ಧಿಯ ಲಾಭಗಳಿಸುವರು.

ಈ ಭವಸಂಸಾರವು ತೋರಿಕೆಗೆ ಮಧುರವಾಗಿರುವುದಾದರೂ, ಪಂಡಿತರಾದವರು ಇದನ್ನು ನಿಬಿಡವಾದ ಅರಣ್ಯಾಭ್ಯಂತರದಲ್ಲಿರುವ ದಾವಾಗ್ನಿಗೆ ಸದೃಶವಾದುದೆಂದು ತಿಳಿದಿರುವರು. ಭಗವಂತನಿಂದ ಬಹಿರ್ಮುಖರಾದ ಜೀವರು ದಾವಾಗ್ನಿ ಸದೃಶವಾದ ಸಂಸಾರದ ತಾಪದಿಂದ ಸತತವೂ ಬಳಲುತ್ತಿರುತ್ತಾರೆ. ಆದರೆ, ಶ್ರೀಕೃಷ್ಣನ ಸಮ್ಯಕ್ ಕೀರ್ತನವು ನಡೆದಲ್ಲಿ ಈ ಸಂಸಾರದಲ್ಲಿ ವಾಸಿಸುವ ಸಮಯದಲ್ಲಿಯೇ ಕೃಷ್ಣೋನ್ಮುಖತೆಯ ಫಲವಾಗಿ ಜೀವರು ದಾವಾಗ್ನಿಯ ತಾಪದಿಂದ ನಿಷ್ಕೃತಿಯನ್ನು ಗಳಿಸುವರು.

ಶ್ರೀಕೃಷ್ಣ ಸಂಕೀರ್ತನವು ಜೀವಾತ್ಮರಿಗೆ ಆತ್ಯಂತಿಕವಾದ ಶ್ರೇಯಸ್ಸನ್ನು ವಿತರಿಸುವುದು. ಪೂರ್ಣಚಂದ್ರೋದಯದ ಫಲವಾಗಿ ಕುಮುದ ಪುಷ್ಪವು ಪ್ರಸ್ಫುಟಿತವಾಗಿ ಶುಭ್ರತ್ವದ ಲಾಭಗಳಿಸುವಂತೆ ಶ್ರೀಕೃಷ್ಣ ಸಂಕೀರ್ತನದ ಫಲವಾಗಿ ಅಖಿಲ ಕಲ್ಯಾಣವು ಸಮುದಿತವಾಗುವುದು. ಕರ್ಮ, ಅನ್ಯಾಭಿಲಾಷೆ ಇತ್ಯಾದಿಗಳು ಜೀವಾತ್ಮರ ಪರಮ ಕಲ್ಯಾಣವನ್ನು ಗಳಿಸಿಕೊಡಲಾರವು.

ಜಗತ್ತಿನಲ್ಲಿ ವಿದ್ಯೆಯು ದ್ವಿವಿಧವಾದುದಾಗಿದ್ದು 'ಲೌಕಿಕ ವಿದ್ಯೆ'ಹಾಗೂ'ಪರಾವಿದ್ಯೆ' ಎಂಬುದಾಗಿ ತಿಳಿಯಲ್ಪಡುತ್ತದೆ. ಶ್ರೀಕೃಷ್ಣ ಸಂಕೀರ್ತನವು ಗೌಣಭಾವದಲ್ಲಿ ಲೌಕಿಕವಿದ್ಯೆಯ ಜೀವನ ಸದೃಶವೂ, ಮುಖ್ಯ ಭಾವದಲ್ಲಿ ಪರಾವಿದ್ಯೆಯ ಅಥವಾ ಅಪ್ರಾಕೃತ ವಿದ್ಯೆಯ ಜೀವನವೂ ಆಗಿದೆ. ಶ್ರೀಕೃಷ್ಣ ಸಂಕೀರ್ತನೆಯ ಪ್ರಭಾವದಿಂದ ಜೀವರು ಹೇಯವಾದ ಜಾಗತಿಕ ವಿದ್ಯೆಗಳ ಅಹಂಕಾರದಿಂದ ಉನ್ಮುಕ್ತರಾಗಿ ಕೃಷ್ಣ ಸಂಬಂಧ ಜ್ಞಾನವನ್ನು ಲಾಭಗಳಿಸುವರು. ಅಪ್ರಾಕೃತವಿದ್ಯೆಯ ಲಕ್ಷ್ಮೀಭೂತವಾದ ವಸ್ತುವೇ ಶ್ರೀಕೃಷ್ಣ ನಾಮ ಸಂಕೀರ್ತನವು.

ಶ್ರೀಕೃಷ್ಣ ಸಂಕೀರ್ತನವು ಜೀವರ ಅಪ್ರಾಕೃತ ಆನಂದಸಾಗರವನ್ನು ವರ್ಧಿಸುವುದು. ಜಾಗತಿಕ ವಿಷಯಭೋಗಗಳು ಹೇಯವಾದ ಜಡಾನಂದವನ್ನೂ, ಜ್ಞಾನಮಾರ್ಗವು ಅಣುಪರಿಮಾಣವಾದ ಬ್ರಹ್ಮಾನಂದವನ್ನೂ ದಾನಗೈದಲ್ಲಿ ಭಕ್ತರಿಂದ ಕೀರ್ತಿತವಾದ ಹರಿನಾಮ ಸಂಕೀರ್ತನವು ಅಸೀಮವೂ ಅಖಂಡವೂ ಆಗಿರುವ ಕೃಷ್ಣಾನಂದವನ್ನು ನೀಡುವುದು. ಪ್ರಾಕೃತ ದೇಶಕಾಲಗಳಿಗೆ ಅತೀತವಾದ ಈ ಕೃಷ್ಣಾನಂದವು ವರ್ಣನಾತೀತವಾಗಿದ್ದು ಪ್ರತಿಕ್ಷಣವೂ ನವನವಾಯಮಾನವಾಗಿ ಭಾಸವಾಗುವುದು.

ಶ್ರೀಕೃಷ್ಣ ಸಂಕೀರ್ತನವು. ಕೀರ್ತಿತವಾದ ಪ್ರತಿಯೊಂದು ಪದಗಳ ಮೂಲಕವಾಗಿಯೂ ಪೂರ್ಣಾಮೃತದ ಆಸ್ವಾದನೆಯನ್ನು ಒದಗಿಸುವುದು. ಅಪ್ರಾಕೃತ ರಸಾಸ್ವಾದನೆಯಲ್ಲಿ ಆ ಭಾವವೂ ಆ ಪೂರ್ಣತೆಯೂ ಇರುವುದಿಲ್ಲ ಶ್ರೀಹರಿಯು ಪೂರ್ಣ ರಸಾಮೃತ ಸಮುದ್ರನಾಗಿರುವುದರಿಂದ ಹರಿನಾಮ ಸಂಕೀರ್ತನೆಯಿಂದಲೇ ಹರಿದಾಸನಾದ ಜೀವಾತ್ಮನು ಶ್ರೀಹರಿಯ ಅನುಗ್ರಹದಿಂದ ಸರ್ವಕ್ಷಣದಲ್ಲೂ ಪೂರ್ಣವೂ ನಿತ್ಯವೂ ಆದ ಚಿದ್ರಸವನ್ನು ಆಸ್ವಾದಿಸುವನು.

ಸಕಲವಿಧವಾದ ಅಪ್ರಾಕೃತ ವಸ್ತುಗಳು ಶ್ರೀಕೃಷ್ಣ ಸಂಕೀರ್ತನೆಯಿಂದಾಗಿ ಸ್ನಿಗ್ಧತ್ವವನ್ನು ಗಳಿಸುವುವು. ಪ್ರಾಕೃತವಾದ ದೇಹ–ಮನಸ್ಸುಗಳೂ, ಜಡಾತೀತವಾದ ಆತ್ಮವೂ ನಾಮ ಸಂಕೀರ್ತನೆಯ ಫಲವಾಗಿ ಸಂಪೂರ್ಣ ನಿರ್ಮಲತೆಯನ್ನು ಹೊಂದುವುವು. ಮಾತ್ರವಲ್ಲದೆ ಅವುಗಳು ಭಗವದ್ರಸಾನುಭವದ ಕಾರಣವಾಗಿ ಸ್ನಿಗ್ಧತ್ವವನ್ನೂ ಹೊಂದುವುವು. ಉಪಾಧಿಗ್ರಸ್ತರಾದ ಜೀವರು ಜನ್ಮಜನ್ಮಾಂತರಗಳಿಂದ ಸಂಪಾದಿಸಿರುವ ಸ್ಥೂಲ–ಸೂಕ್ಷ್ಮ ಮಲಿನತೆಗಳೆಲ್ಲವೂ ಕೀರ್ತನೆಯ ಪ್ರಭಾವದಿಂದ ಧೌತವಾಗುವುವು. ಜೀವಾತ್ಮನ ಜಡಾಭಿನಿವೇಶವು ತೊಲಗಿದಲ್ಲಿ ಕೃಷ್ಣೋನ್ಮುಖವಾದ ಜೀವನು ಸುಶೀತಲವಾದ ಕೃಷ್ಣ ಪಾದಪದ್ಮಗಳ ಸೇವಾಸುಖವನ್ನು ಲಾಭಗಳಿಸುವನು.

ಗೌಡೀಯ ವೈಷ್ಣವಾಚಾರ್ಯ ಪ್ರಮುಖರಾದ ಶ್ರೀ ಜೀವಗೋಸ್ವಾಮಿಯವರು ತನ್ನಿಂದ ರಚಿತವಾದ 'ಶ್ರೀ ಭಕ್ತಿಸಂದರ್ಭ'ದಲ್ಲಿಯೂ 'ಕ್ರಮಸಂದರ್ಭ'ದಲ್ಲಿಯೂ ತಿಳಿಸಿರುವರೇನೆಂದರೆ,–"ಅತ ಏವ ಯದ್ಯಪ್ಯನ್ಯಾ ಭಕ್ತಿಃ ಕಲೌ ಕರ್ತವ್ಯಾ, ತದಾ ಕೀರ್ತನಾಖ್ಯಾ ಭಕ್ತಿ ಸಂಯೋಗೇನೈವ" ಅರ್ಥಾತ್ ಕಲಿಯುಗದಲ್ಲಿ ನವಧಾ ಭಕ್ತಿಯ ಇತರ ಎಂಟು ಅಂಗಗಳ ಅನುಷ್ಠಾನಗಳು ಕರ್ತವ್ಯವಾಗಿದ್ದರೂ ಕೂಡ ಅವೆಲ್ಲವುಗಳನ್ನು ಕೀರ್ತನಾಖ್ಯಾಭಕ್ತಿಯ ಸಂಯೋಗದಲ್ಲಿಯೇ ಸಾಧನಗೈಯಬೇಕು.

ಜಯತಿ ಜಗನ್ಮಂಗಲಂ ಹರೇರ್ನಾಮ

---

( 19ನೇ ಪುಟದಿಂದ)

ರಚಿಸಿದ ಗ್ರಂಥಗಳು ಅಪಾರ. ವೇದಾಂತ ದೇಶಿಕರ ಪ್ರಕಾರ ಮರ್ಕಟಕಿಶೋರ ನ್ಯಾಯದಂತೆ ಪ್ರಪನ್ನನಿಗೆ ಕರ್ಮಾನುಷ್ಠಾನ ಅತ್ಯವಶ್ಯಕ. ಕೋತಿ ಮರಿ ತನ್ನ ತಾಯಿಯನ್ನು ಗಟ್ಟಿಯಾಗಿ ಅಪ್ಪಿ ಹಿಡಿದಿರುವಂತೆ ಸಾಧಕನು ಭಗವಂತನನ್ನು ಭಕ್ತಿಯಿಂದ ಭಜಿಸಲೇಬೇಕು. ವಿಶಿಷ್ಟಾದ್ವೈತದಲ್ಲಿ ಭಕ್ತಿ, ಆರಾಧನೆಗಳು ಮುಖ್ಯ ಅಂಗಗಳಾಗಿವೆ. ಈ ಮತದ ಪ್ರಕಾರ ಬ್ರಹ್ಮ,ಜೀವ, ಜಗತ್ತು ಎಲ್ಲವೂ ಸತ್ಯ, ಮಿಥ್ಯೆ ಅಲ್ಲ. ಶ್ರೀಮನ್ನಾರಾಯಣನು ನಮಗೆ ಪ್ರಾಪ್ಯ, ಪ್ರಾಪಕನೂ ಹೌದು. ಇಹಲೋಕದ ಸುಖ ಅತ್ಯಲ್ಪ. ಅಪಾರವಾದ ದುಃಖಕ್ಕೆ ಮೂಲ. ಇದು ನಿಜವಾದ ಸುಖವಲ್ಲ. ಸ್ವರ್ಗಾದಿ ಪಾರಲೌಕಿಕ ಸುಖಗಳು ಬಹುಕಾಲ ಆನಂದ ಕೊಡುತಕ್ಕದ್ದಲ್ಲ. ಕರ್ಮ ಸವೆದಮೇಲೆ ಪುನಃ ಇಹಲೋಕಕ್ಕೆ ಮರಳಿ ಬರಬೇಕಾಗುತ್ತೆ. ಆದ್ದರಿಂದ ಶಾಶ್ವತವಾದ ಸೌಖ್ಯ ಎಂದರೆ ಪರಮಪದವನ್ನು ಹೊಂದುವ ಮಾರ್ಗ. ಇದಕ್ಕೆ ಸುಲಭವಾದ ಮಾರ್ಗ ಹಿಂದೆ ಹೇಳಿದ ಶರಣಾಗತಿ ಅಥವಾ ಪ್ರಪತ್ತಿ ಮಾರ್ಗಗಳೇ ಚರಮೋಪಾಯ. ಶ್ರೀ ರಾಮಾವತಾರದಲ್ಲಿ ಶ್ರೀರಾಮನು ಕೊಟ್ಟ ಭರವಸೆ ನಮಗೆ ಮೂಲಾಧಾರ.

"ಸಕೃದೇವ ಪ್ರಪನ್ನಾಯ ತವಾಸ್ಮೀತಿ
ಚಯಾಚತೇ
ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ
ತದ್ವ್ರತಂ ಮಮ"

ಒಮ್ಮೆ ನನ್ನಲ್ಲಿ ಶರಣಾಗತಿಯನ್ನು ಮಾಡಿ ಬಂದವನನ್ನು ಯಾರೇ ಆಗಲಿ ಖಂಡಿತವಾಗಿ ನಾನು ರಕ್ಷಿಸುತ್ತೇನೆ. ಇದು ನನ್ನ ವ್ರತ. ಇದು ನನ್ನ ಪ್ರತಿಜ್ಞೆ ಎಂಬುದಾಗಿ ಶ್ರೀರಾಮನು ಅಭಯ ಪ್ರಧಾನವಾದ ವ್ರತವನ್ನು ಹಿಡಿದಿರುವಾಗ ಎಲ್ಲಾ ಮಾನವರು ಅವನಲ್ಲಿ ಶರಣಾಗತರಾಗುವುದರಲ್ಲಿ ತಮ್ಮ ಹಿತ ಪುರುಷಾರ್ಥಗಳನ್ನು ಕಂಡುಕೊಳ್ಳಬೇಕು.

"ವೈಕುಂಠೇತು ಪರೇಲೋಕೇ।
ಶ್ರೀಯಸಾರ್ಧಂ ಜಗತ್ಪತಿಃ
ಆಸ್ತೇ ವಿಷ್ಣುಃ ಅಚಿಂತ್ಯಾತ್ಮಾ।
ಭಕ್ತೈಃ ಭಾಗವತೈಸಹ"

ಎಂಬುದನ್ನು ನಿತ್ಯವೂ ಸ್ಮರಿಸುತ್ತಾ ಆ ಪರಮಪದವನ್ನು ಹೊಂದುವ ಅಭಿಲಾಷೆಯಲ್ಲಿ ಎಲ್ಲಾ ಪ್ರಪನ್ನರು ನಿರತರಾಗಬೇಕು.

"ಸರ್ವ ಕರ್ಮಫಲ ಪ್ರದೋಹಿ ವಿಷ್ಣುಃ" ಎಂಬಂತೆ ಸರ್ವ ಕರ್ಮ ಫಲಪ್ರದನು ವಿಷ್ಣುವು ಎಂಬುವುದನ್ನು ತಿಳಿದು ಕೃತಕೃತ್ಯರಾಗೋಣ.★

# ತಾಳ್ಳಪಾಕಂ ವಾಗ್ಗೇಯಕಾರರು

ಕ್ರಿ.ಶ. ೧೫ ಮತ್ತು ೧೬ ನೆಯ ಶತಮಾನಗಳಲ್ಲಿ ತೆಲುಗು ದೇಶದಲ್ಲಿ ತಾಳ್ಳಪಾಕಂ ಮನೆತನದ ಮೂವರು ಕವಿಗಳು ಪ್ರಸಿದ್ಧರಾಗಿದ್ದರು. ಇವರು ಕವಿಗಳಾಗಿದ್ದುದಕ್ಕಿಂತ ಹೆಚ್ಚಾಗಿ ವಾಗ್ಗೇಯಕಾರರೂ ಆಗಿದ್ದರು. ಇವರು ತಿರುಮಲೆಯ ವೆಂಕಟೇಶ್ವರನ ಅವಿಚ್ಛಿನ್ನ ಭಕ್ತರು. ಇವರಲ್ಲಿ ಒಬ್ಬೊಬ್ಬರೂ ಅನೇಕ ಸಂಕೀರ್ತನೆಗಳನ್ನು ರಚಿಸಿ ವೆಂಕಟೇಶನಿಗೆ ಅರ್ಪಣೆಮಾಡಿದ್ದಾರೆ. ಇವರು ಒಟ್ಟು ಸುಮಾರು ಒಂಬತ್ತುಸಾವಿರ ಸಂಕೀರ್ತನಗಳು ಮೂರುಸಾವಿರ ತಾಮ್ರಪಟಗಳಲ್ಲಿ ಕಂಡರಸಲ್ಪಟ್ಟು ತಿರುಮಲೆಯ ದೇವಸ್ಥಾನದಲ್ಲಿ ಇಡಲ್ಪಟ್ಟಿವೆ ಇದನ್ನು ಇಟ್ಟಿರುವ ಕೊಟಡಿಗೆ 'ಸಂಕೀರ್ತನ ಭಂಡಾರ' 'ತಾಳ್ಳಪಾಕಂ ಅರಾ' ಅಥವಾ 'ತಾಳ್ಳಪಾಕಂ ಕೊಟ್ಟು' ಎಂಬ ಹೆಸರಿದೆ. ಇದು ತಿರುಮಾಮಣಿ ಮಂಟಪದಲ್ಲಿ ಕೊಪ್ಪರದ (ಹುಂಡಿಯ) ಪಕ್ಕದಲ್ಲಿದೆ. ಇಲ್ಲಿರುವ ತಾಮ್ರಪಟಗಳು ಪ್ರಮಾಣದಲ್ಲಿ ಸುಮಾರು ಎರಡು ಗಾಡಿಗಳಷ್ಟಾಗುತ್ತದೆ. ಇವುಗಳೆಲ್ಲ ಪ್ರತಿಮಾಡಲ್ಪಟ್ಟು ಅವುಗಳ ಅನೇಕ ಭಾಗವು ಸಂಶೋಧಿತವಾಗಿ ಮುದ್ರಿತವಾಗುತ್ತಿವೆ.

ತಾಳ್ಳಪಾಕಂಗ್ರಾಮವು ಈಗಿನ ಕಡಪಜಿಲ್ಲೆಯ ರಾಜಂಪೇಟೆಗೆ ಸೇರಿದುದು. ತಾಳ್ಳಪಾಕಂ ಮನೆತನದಲ್ಲಿ ಮೊದಲನೆಯವರಾದ ಅನ್ನಮಾಚಾರ್ಯರು ನಾರಾಯಣಸೂರಿಯವರ ಮಗ. ಅವರ ತಾಯಿ ಅಕ್ಕಮಾಂಬಾ. ಅವರು ಜನಿಸಿದುದು ಕ್ರಿ.ಶ. ೧೪೦೮ ರಲ್ಲಿ. ಅವರಿಗೆ ಅಣ್ಣಯ್ಯಂಗಾರ್, ಅಣ್ಣಮಯ್ಯಂಗಾರ್ ಎಂಬ ಹೆಸರುಗಳ ಉಂಟು. ನಂದಾವರ್ತಕ ಸ್ಮಾರ್ತ ಬ್ರಾಹ್ಮಣರು. ಇವರು ೧೬ನೆಯ ವಯಸ್ಸಿನಲ್ಲಿಯೇ ತಿರುಪತಿಗೆ ಬಂದು ಶ್ರೀ ಅಹೋಬಿಲ ಮಠದ ಶ್ರೀ ಆದಿವಣ್ ಶಠಗೋಪರರಿಂದ ಶ್ರೀವೈಷ್ಣವದೀಕ್ಷೆಯನ್ನು ಪಡೆದು ಆ ದರ್ಶನದಲ್ಲಿ ಉದ್ದಾಮ ಪಂಡಿತರಾದರು. ಇವರದು ಭರದ್ವಾಜ ಗೋತ್ರ, ಆಶ್ವಲಾಯನ ಸೂತ್ರ, ಸಾಮಶಾಖೆ, ಕೃಷ್ಣದೇವರಾಯನ ಆಸ್ಥಾನಕವಿ ವೃಷಭನಾಗಿದ್ದ ಅಲ್ಲಸಾನಿಪೆದ್ದನ್ನನೂ ಇದೇ ಪಂಗಡದವನು.

ತಾಮ್ರಪಟಗಳ ಆಧಾರದಮೇಲೆ ಅನ್ನಮಾಚಾರ್ಯರು 'ಆಧ್ಯಾತ್ಮ ಸಂಕೀರ್ತನಮುಲು' 'ಶೃಂಗಾರ ಸಂಕೀರ್ತನಮುಲು' ಮತ್ತು 'ಶೃಂಗಾರಮಂಜರಿ' ಎಂಬ ಕೃತಿಗಣವನ್ನು ರಚಿಸಿರುವಂತೆ ತಿಳಿದುಬರುತ್ತದೆ. ಮೊದಲೆರಡು ಗ್ರಂಥಗಳ ಉಪೋದ್ಘಾತ ಭಾಗಗಳಿಂದ ಇವರು ತಮ್ಮ ಸಂಕೀರ್ತನೆಗಳನ್ನು ಶಕ ೧೩೪೬ ನೆಯ ಕ್ರೋಧಿ ಸಂವತ್ಸರ (ಕ್ರಿ ಶ. ೧೪೧೪) ದಲ್ಲಿ ಪ್ರಾರಂಭಿಸಿದರೆಂದು ತಿಳಿದು ಬರುತ್ತದೆ. ಆಗ ಅವರಿಗೆ ೧೬ ವರ್ಷ ವಯಸ್ಸಾಗಿತ್ತಂತೆ. ಆಗ ಶ್ರೀ ವೆಂಕಟೇಶ್ವರನು ಅವರಿಗೆ ಪ್ರತ್ಯಕ್ಷವಾಗಿ ಸಂಕೀರ್ತನೆಗಳನ್ನು ರಚಿಸುವಂತೆ ಆಜ್ಞೆಮಾಡಿದನಂತೆ. ಆದರಂತೆ ಅವರು ವೆಂಕಟೇಶ್ವರನ ವಿಷಯವಾಗಿ ಸಂಕೀರ್ತನೆಗಳನ್ನು ರಚಿಸಲು ಪ್ರಾರಂಭಮಾಡಿ ಶಕ ೧೪೨೪ ನೆಯ ದುಂದುಭಿ ಸಂವತ್ಸರದ ಫಾಲ್ಗುಣ ಕೃಷ್ಣ ದ್ವಾದಶಿಯವರೆಗೆ (ಕ್ರಿ. ಶ. ೧೫೧೩) ಕೃತಿರಚನೆ ಮಾಡಿದರಂತೆ. ಅಂದಿನಿಂದ ಅವರ ಹಿರಿಯಮಗ ಪೆದ್ದ ತಿರುಮಲಯ್ಯಂಗಾರ್ಯರು ಕೃತಿರಚನೆಗೆ ಪ್ರಾರಂಭಮಾಡಿದರಂತೆ. ಅಂದರೆ ಸುಮಾರು ೮೦ ವರ್ಷಗಳಕಾಲ ತಮಗೆ ೯೬ ವರ್ಷಗಳಾಗುವ ವರೆಗೆ ಕೃತಿರಚನೆಮಾಡುತ್ತಿದ್ದಿರಬೇಕು. ಅವರು ತಮ್ಮ ಈ ಕೀರ್ತನೆಗಳನ್ನು ವೆಂಕಟೇಶ್ವರನ ಪ್ರತ್ಯಕ್ಷದಲ್ಲಿಯೇ ರಚಿಸಿ ಅವನಿಗೇ ಅಂಕಿತಮಾಡಿದ್ದಾರೆ. ಇವರು ರಚಿಸಿದ ಕೀರ್ತನೆಗಳ ಸಂಖ್ಯೆ ೩೨೧೦೦. ಅವರು ಪ್ರತಿದಿನ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಬಟ್ಟೆ ಒಣಗುವ ಮೊದಲೇ ಕೀರ್ತನೆಗಳನ್ನು ರಚಿಸಿ ವೆಂಕಟೇಶನಿಗೆ ಒಪ್ಪಿಸುವುದು ಪದ್ಧತಿ.

ಇವರು ಆದಿವಣ್ ಶಠಗೋಪ ಜೀಯರ್ ಮತ್ತು ಕಂದಾಡೆ ರಾಮಾನುಜಯ್ಯಂಗಾರ್ಯರ ಸಮಕಾಲೀನರಾಗಿ ವಿಜಯನಗರದ ಇಮ್ಮಡಿ ದೇವರಾಯ, ವಿರೂಪಾಕ್ಷ, ಸಾಳುವ ನರಸಿಂಹ ಮತ್ತು ಇಮ್ಮಡಿ ನರಸಿಂಹರ ಸಮಕಾಲೀನರಾಗಿಯೂ ಇದ್ದಿರಬೇಕು. ಸಾಳುವತುಳುವ ವಂಶಗಳ ಬದಲಾವಣೆಗಳನ್ನು ಕಣ್ಣಾರೆ ಕಂಡಿರಬೇಕು.

ಶೃಂಗಾರ ಸಂಕೀರ್ತನೆಗಳಲ್ಲಿ ಕವಿಯು ವೆಂಕಟೇಶ್ವರಸ್ವಾಮಿಯನ್ನು ನಾಯಕನಂತೆಯೂ ತನ್ನನ್ನು ನಾಯಕಿಯಂತೆಯೂ ಭಾವಿಸಿ ನಾಯಕನ ದಿವ್ಯಸೌಂದರ್ಯದ ಸಂಶ್ಲೇಷಕ್ಕಾಗಿ, ಪ್ರಾರ್ಥಿಸಿ ಆಕ್ರಂದನಮಾಡಿ ಹಾತೊರೆಯುತ್ತಿರುವುದು ವರ್ಣಿತವಾಗಿದೆ. ಆಧ್ಯಾತ್ಮ ಸಂಕೀರ್ತನೆಗಳು ಪ್ರಧಾನವಾಗಿ ಎಲ್ಲರಲ್ಲಿಯೂ ಭಕ್ತಿಪ್ರಪತ್ತಿಗಳನ್ನು ಮೂಡಿಸುವಂಥದಾಗಿರುತ್ತವೆ. ಭಗವಂತನ ದರ್ಶನವಿಲ್ಲದವನ ಬಾಳು ಎಷ್ಟು ನಿರರ್ಥಕವೆಂಬುದು ಬಹು ಹೃದಯಂಗಮವಾಗಿ ಚಿತ್ರಿತವಾಗಿದೆ. ಆದುದರಿಂದ ಈ ಸಂಕೀರ್ತನೆಗಳು ಸಾಮಾನ್ಯರಿಗೆ ಸಂಬೋಧಿತವಾಗಿ ಅವರಿಗೆ ವೆಂಕಟೇಶ್ವರನ ಪ್ರತ್ಯಕ್ಷ ದರ್ಶನಮಾಡಿಸಲು ಪ್ರಯತ್ನಮಾಡಿವೆ. 'ಕಂಸಾಂತಕ ವೆಂಕಟ ಪ್ರಸಂನ್ನೈವ ಪಶ್ಚಾದಿಹನಾಸ್ತಿ' ತ್ರಿದಂಶವಂದ್ಯಡು ತಿರುವೇಂಗಡುಕಿ ವೆದಕಿ, ವೆದಕಿ ಸೇವಿಂಚುಡಿ' ಎಂದು ಘೋಷಿಸಿದ್ದಾರೆ.

ಮೂರನೆಯ 'ಶೃಂಗಾರಮಂಜರಿ'ಯಲ್ಲಿ ವಿರಹದಗ್ಧಳಾದ ಕನ್ನೆಯು ಅವಳ ಸಖಿಯರ ಮೂಲಕ ವೆಂಕಟೇಶನ ಸಂಶ್ಲೇಷಕ್ಕಾಗಿ ಹಲುಬುತ್ತಿರುವುದು ಉಕ್ತವಾಗಿದೆ. ಇದು ನಾಲ್ಕುಪಟಗಳ ಎರಡು ಕಡೆಗಳಲ್ಲಿಯೂ ಕೆತ್ತಲ್ಪಟ್ಟಿದೆ. ಇದು ಒಂದು ಲಘುಕಾವ್ಯ. ಈ ಗ್ರಂಥಾಂತರ ಭಾಗದಲ್ಲಿ ತಾವು ನಂದಾವರ್ತ ವರ್ಗಕ್ಕೆ ಸೇರಿದ ಭರದ್ವಾಜ ಗೋತ್ರದವರೆಂದೂ ಶ್ರುತಪಡಿಸಿದ್ದಾರೆ. ಅನ್ನಮಾರ್ಯರ ಪೌತ್ರರಾದ ಚಿನ್ನ ವೇಂಕಟನಾಥರು ತನ್ನ 'ಪರಮಯೋಗೀವಿಲಾಸ'ದಲ್ಲಿ ಈ ಅಭಿಪ್ರಾಯವನ್ನು ಅನುಮೋದಿಸಿರುವುದಲ್ಲದೆ ಅನ್ನಮಾರ್ಯರು ತಮಗೆ ಜ್ಞಾನೋಪದೇಶಮಾಡಿ ಶಂಖಚಕ್ರಪಾಣಿಯಾದ ಶ್ರೀ ವೆಂಕಟೇಶ್ವರನನ್ನು ತನ್ನ ಹೃದಯದಲ್ಲಿ ನಿಕ್ಷಿಪ್ತಮಾಡಿದರೆಂದೂ ಸಂಕೀ



ಡಾ|| ಎನ್. ಅನಂತರಂಗಾಚಾರ್

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನ | ಪ್ರಾ 8-00 | ಪ್ರಾ 8-30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | ,, | 40-00 |
| 3. | ಪುಳಿಯೋಗರೆ | , | 50-00 |
| 4. | ಪೊಂಗಲು | ,, | 55-00 |
| 5. | ಸಕ್ಕರೆಪೊಂಗಲ್ | ,, | 65-00 |
| 6. | ಶಾಕರ ಭಾತ್ | , | 85-00 |
| 7. | ಕೇಸರೀ ಭಾತ್ | ,, | 90-00 |
| 8. | ಸೀರ | ,, | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ರ್ತನೆಗಳನ್ನು ರಚಿಸುವುದರ ಮೂಲಕ ವೇದಸಾರವನ್ನೇ ಜನಕೋಟಿಗೆ ಪ್ರದಾನಮಾಡಿರುವರೆಂದೂ ಶ್ರೀವೈಷ್ಣವ ಸಂಪ್ರದಾಯವನ್ನು ಸ್ವೀಕರಿಸಿ ಎಲ್ಲರಿಗೂ ಮೋಕ್ಷಸಾಮ್ರಾಜ್ಯದ ಮಾರ್ಗವನ್ನು ಸುಗಮಗೊಳಿಸಿದರೆಂದೂ ತಿಳಿಸಿದ್ದಾರೆ.

ಅನ್ನಮಾಚಾರ್ಯರು ವಿಶಿಷ್ಟಾದ್ವೈತ ತತ್ತ್ವ ಮತ್ತು ದ್ರಾವಿಡ ಪ್ರಬಂಧಗಳ ಸಂಪೂರ್ಣ ಪರಿಚಯಮಾಡಿಕೊಂಡರು. ಇವರಿಗೆ ಸಂಕೀರ್ತನಾಚಾರ್ಯ 'ದ್ರಾವಿಡಾಗಮ ಸಾರ್ವಭೌಮ', 'ಪಂಚಾಗಮ ಚಕ್ರವರ್ತಿ' ಎಂಬ ಪ್ರಶಸ್ತಿಗಳು ದೊರೆತವು. ಇವರ ಪೌತ್ರರಾದ ಚಿನ್ನ ತಿರುಮಲಯ್ಯಂಗಾರ್ಯರ 'ಸಂಕೀರ್ತನ ಲಕ್ಷಣಮು' ಎಂಬ ತೆಲುಗು ಗ್ರಂಥದ ಉಪೋದ್ಘಾತದಲ್ಲಿ ಆ ಗ್ರಂಥವು ಮೊದಲು ಸಂಸ್ಕೃತಭಾಷೆಯಲ್ಲಿ ಅವರ ಪಿತಾಮಹರಿಂದ ರಚಿತವಾಗಿತ್ತೆಂದೂ ತಮ್ಮ ತಂದೆಯ ಆದೇಶದಮೇಲೆ ತಾವು ಅದನ್ನು ತೆಲುಗಿನಲ್ಲಿ ರಚಿಸಿದಂತೆಯೂ ತಿಳಿಸಿದ್ದಾರೆ. ಹಾಗೆಯೇ ಅನ್ನಮಯ್ಯಂಗಾರ್ಯರು ವೆಂಕಟೇಶ ಮತ್ತು ಅಲಮೇಲ್ ಮಂಗೈ ವಿಷಯಕವಾದ 'ಶೃಂಗಾರವೃತ್ತ ಪದ್ಯ ಶತಕಮುಲು' ಎಂಬ ಒಂದು ಶತಕಗ್ರಂಥವನ್ನು ರಚಿಸಿರುವಂತೆ ತಿಳಿದು ಬರುತ್ತದೆ. ಇದಕ್ಕೆ 'ವೆಂಕಟೇಶ್ವರ ಶತಕ'ವೆಂಬ ಹೆಸರೂ ಉಂಟು.

ಇವಲ್ಲದೆ ಇವರು ತೆಲುಗಿನಲ್ಲಿ 'ದ್ವಿಪದೀ ರಾಮಾಯಣ' ವನ್ನು ಸಂಸ್ಕೃತದಲ್ಲಿ 'ವೆಂಕಟೇಶಮಾಹಾತ್ಮ್ಯ' ವನ್ನು ರಚಿಸಿರುವಂತೆ ಪ್ರತೀತಿ. 'ದ್ವಿಪದೀರಾಮಾಯಣ'ವು ಉಪಲಬ್ಧವಲ್ಲ. ಅವರು ಸಂಸ್ಕೃತ ಮತ್ತು ತೆಲುಗುಭಾಷೆಗಳಲ್ಲಿಯ ಪಂಡಿತರಾಗಿದ್ದರು. ಅವರ ಕವಿತೆಯಲ್ಲಿ ಅವೆರಡೂ ಸಮರಸವಾಗಿ ಹೊಂದಿಕೊಂಡಿದೆ. ಹಾಗೆಯೇ ಸಾಹಿತ್ಯಸಿದ್ಧಿಯನ್ನು ಸಂಗೀತಸಾಧನೆಯನ್ನು ಅವರಲ್ಲಿ ಕಾಣಬಹುದು. ಅಲ್ಲಿ ಯೋಗ, ವೈರಾಗ್ಯ, ಶೃಂಗಾರ ಮತ್ತು ಭಕ್ತಿಗಳು ಸಮರಸವಾಗಿ ಮಿಳಿತವಾಗಿವೆ. ರಾಗಭಾವಗಳ ಸಮಜೋಡಣೆಯನ್ನು ಅಲ್ಲಿ ಕಾಣಬಹುದು. ಅವರಿಗೆ ಪದಕವಿತಾಪಿತಾಮಹ ಎಂಬ ಬಿರುದಿತ್ತು.

ಇವರು ಕ್ಷೇತ್ರಯ್ಯನಿಗೂ ತ್ಯಾಗರಾಜರಿಗೂ ಆದರ್ಶರಾದರು. ಅವರಂತೆ ಇವರಿಗೆ ಶಿಷ್ಯಪರಂಪರೆಯಿಲ್ಲದುದರಿಂದ ಇವರು ಅವರಷ್ಟು ಪ್ರಸಿದ್ಧಿಗೆ ಬರಲಿಲ್ಲ. ಅವರು ಸೂಚಿಸಿರುವ ಅನೇಕರಾಗಗಳು ಈಗ ಬಳಕೆಯಲ್ಲಿಲ್ಲ. ಅಬಲ, ಅಮೃತಸಿಂಧು, ಕೊಂಡಮಲಹರಿ, ಮುಖಾರಿಪಂತ, ಮುಂತಾದುವು ಅಂತಹವು. ಈಗಿನ ರಾಗಗಳು ಆಗಿನ ಕಾಲದಲ್ಲಿ ಬೇರೆ ಹೆಸರನ್ನು ಪಡೆದಿದ್ದಂತೆ ಕಾಣುತ್ತದೆ. ಮೋಹನ, ರೇಗುಪ್ತಿಯಾಗಿತ್ತಂತೆ. ಕೀರ್ತನೆಗಳು ಪಲ್ಲವಿ, ಅನುಪಲ್ಲವಿ, ಚರಣಗಳು ಎಂಬ ವಿಭಜನೆಗೆ ಇವರೇ ಕಾರಣರೆಂದು ಹೇಳಬಹುದು. ಸಂಗೀತವನ್ನು ಜನಪ್ರಿಯವಾಗಿಸಲು ಇವರು ಚಂದಮಾಮಾ ಹಾಡುಗಳು ಗೊಬ್ಬಿಳ್ಳು, ಲಾಲಿ, ಜೋಜೋ, ಉಯ್ಯಾಲಿಪದಗಳು, ಸೋಬಾನೆಪದಗಳು ಮಂಗಳ, ಆರತಿ, ಪವ್ವಳಿಂಪು (ತೂಗುವ ಹಾಡು), ಸುವ್ವಿ ಹಾಡುಗಳು ಮೊದಲಾದುವುಗಳನ್ನು ಉಪಯೋಗಿಸಿದರು. ಹಳೆಯ ಹಾಡುಗಳ ಧಾಟಿ ಆಕಾಲಕ್ಕೆ ಮರೆಯಾಗುತ್ತಿದ್ದುವು. ಏಲತಮ್ಮೇದಪದ, ಗೊಬ್ಬೀಪದ, ಚಂದಮಾಮಾ ಪದಗಳನ್ನು ಅವರು ಉಳಿಸಿದರು.

ಪುರಂದರದಾಸರು ಅನ್ನಮಾಚಾರ್ಯರನ್ನು ಬೆಟ್ಟದಮೇಲೆ ಕಂಡಿದ್ದರಂತೆ. ಇದು ನಿಜವಾದರೆ ಭಜನಪದ್ಧತಿಯನ್ನು ಪ್ರಾರಂಭಿಸುವುದಕ್ಕೆ ಅವರು ಅನ್ನಮಾಚಾರ್ಯರಿಂದ ಸ್ಫೂರ್ತಿಪಡೆದಿರಬೇಕು. ಪುರಂದರ ದಾಸರು ಅನ್ನಮಾಚಾರ್ಯರೂ ಮಾಳವೀ ರಾಗದಲ್ಲಿಯೇ 'ಶರಣುಶರಣು' ಎಂದೇ ಪ್ರಾರಂಭಮಾಡಿರುವ ಕೃತಿಗಳನ್ನು ರಚಿಸಿರುವುದು ಗಮನೀಯವಾದ ಅಂಶ. ಇವರ ಕೀರ್ತನೆಗಳನ್ನು ವಿಜಯರಾಘವಾಚಾರ್ಯರೂ, ವೇಟೂರಿ ಪ್ರಭಾಕರಶಾಸ್ತ್ರಿಗಳೂ, ರಾಳ್ಳಪಲ್ಲಿ ಅನಂತ ಕೃಷ್ಣ ಶರ್ಮರೂ ಸ್ವರಸಂಯೋಜನೆಮಾಡಿ ಮುದ್ರಣ ಮಾಡಿಸಿದ್ದಾರೆ.

ಅನ್ನಮಾಚಾರ್ಯರಿಗೆ ತಿಮ್ಮಕ್ಕ ಅಥವಾ ತಿರುಮಲಾಂಬಾ ಮತ್ತು ಅಕ್ಕಲಮ್ಮ ಅಥವಾ ಅಕ್ಕಂಬಾ ಎಂಬ ಇಬ್ಬರು ಪತ್ನಿಯರಿದ್ದರು. ತಿಮ್ಮಕ್ಕನ ಮಗ ನರಸಿಂಹ ಕವಿ. ಅಕ್ಕಮ್ಮನಮಗ ಪೆದ್ದತಿರುಮಲಾರ್ಯ. ತಿಮ್ಮಕ್ಕ ಕವಯಿತ್ರಿ – 'ಸುಭದ್ರಾಕಲ್ಯಾಣ'ವೆಂಬ ದ್ವಿಪದೀ ಕಾವ್ಯವನ್ನು ರಚಿಸಿದ್ದಾಳೆ. ನರಸಿಂಹ ಕವಿಯು 'ವರ್ಣಪದ್ಧತಿ'ಯೆಂಬ ಕಾವ್ಯವನ್ನು ರಚಿಸಿರುವಂತೆ ಪ್ರತೀತಿ. ಪೆದ್ದತಿರುಮಲಯ್ಯಂಗಾರ್ಯರು ತಮ್ಮನ್ನು ಅಣ್ಣಯ್ಯ, ತಿಮ್ಮನಾರ್ಯ, ತಿಮ್ಮಯ್ಯ ಎಂದು ಕರೆದುಕೊಂಡಿದ್ದಾರೆ. ತಮ್ಮ ಕವಿತೆಯು ಜೇನಿನಂತೆ ಸಿಹಿ ಎಂದು ತಿಳಿಸಿದ್ದಾರೆ.

ಅನ್ನಮಯ್ಯಂಗಾರ್ಯರ ಪುತ್ರರಾದ ಪೆದ್ದತಿರುಮಲಯ್ಯಂಗಾರ್ಯರ ಶೃಂಗಾರ ಸಂಕೀರ್ತನದ ಪೀಠಿಕಾಭಾಗದಿಂದ ಪೆದ್ದತಿರುಮಲಯ್ಯಂಗಾರ್ಯರು ತಮ್ಮ ಕಾರ್ಯವನ್ನು ಶಕ ೧೪೨೪ ನೆಯ ದುಂದುಭಿ ಸಂವತ್ಸರದಲ್ಲಿ (೧೫೦೨) ಪ್ರಾರಂಭಿಸಿದರೆಂದು ತಿಳಿದು ಬರುತ್ತದೆ. ಇವರು 'ಶೃಂಗಾರ ಸಂಕೀರ್ತನ' 'ವೈರಾಗ್ಯ ವಚನಮಾಲಿಕಾ ಗೀತಮುಲು' 'ಶೃಂಗಾರದಂಡಕಮು', 'ಚಕ್ರವಾಳಮಂಜರಿ', 'ಪದ್ಯಾಲಶತಕಮು', 'ಉದಾಹರಣಮು', 'ನೀತಿ ಪದ್ಯ ಸೀಸ ಶತಕಮು', 'ಸುದರ್ಶನ ರಗಳೆ', 'ರೇಫ ಅಕಾರಮುಲು' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮೊದಲ ಮೂರು ಅವರ

ತಂದೆಯ ಗ್ರಂಥಗಳ ಮಾದರಿಯವು. ನಾಲ್ಕನೆಯ 'ಚಕ್ರವಾಳಮಂಜರಿ' ಶೈಲಿಯಲ್ಲಿ 'ಶೃಂಗಾರ ಮಂಡಕ'ಕ್ಕಿಂತ ವ್ಯತ್ಯಾಸವಾಗಿದ್ದರೂ ವಿಷಯದಲ್ಲಿ ಅಂತಹುದೇ ಆಗಿದೆ. ಐದನೆಯ 'ಶೃಂಗಾರ ವೃತ್ತ ಪದ್ಯಾಲಶತಕಮು' ಬೇರೆಯ ಛಂದಸ್ಸಿನಲ್ಲಿ ರಚಿತವಾಗಿ ವೆಂಕಟೇಶ್ವರನ ಶೃಂಗಾರಚೇಷ್ಟೆಯನ್ನು ವರ್ಣಿಸುತ್ತದೆ. 'ಉದಾಹರಣಮು' ವೆಂಕಟೇಶ್ವರನ ಸ್ತೋತ್ರರೂಪವಾದುದು. ಇದರ ಶೈಲಿಯಲ್ಲಿ ವೃತ್ತ, ಕಲಿಕಾ ಮತ್ತು ಉತ್ಕಲಿಕೆಗಳು ಗಳು ಮಿಶ್ರವಾಗಿವೆ. 'ನೀತಿ ಸೀಸ ಪದ್ಯಾಲ ಶತಕ'ವು ಸೀಸಪದ್ಯದ ಶೈಲಿಯಲ್ಲಿ ಶ್ರೀನಿವಾಸನನ್ನು ಸಂಬೋಧಿಸಿ ರಚಿತವಾಗಿದೆ. ನೀತಿಪ್ರಸಾರಣೆಯೇ ಇದರ ಪ್ರಧಾನ ಉದ್ದೇಶವಾದುದರಿಂದ ಇದೊಂದು ನೀತಿಶಾಸ್ತ್ರ ಘೋಷದಂತಿದೆ. ಇವೆಲ್ಲವೂ ವೆಂಕಟೇಶ್ವರನಿಗೆ ಸಂಬೋಧಿತವಾಗಿವೆ. 'ಸುದರ್ಶನ ರಗಳೆ'ಯು ಶ್ರೀ ವೆಂಕಟೇಶ್ವರನು ಧರಿಸಿರುವ ಸುದರ್ಶನಚಕ್ರದ ಆಕಾರ, ಮಹಿಮೆ ಮತ್ತು ಫಲಗಳನ್ನು ಕುರಿತುದು. ಕೊನೆಯ 'ರೇಫ ಅಕಾರವು ಛಂದೋವಿಷಯಕವಾದ ಗ್ರಂಥ'. ಇದರಲ್ಲಿ ಪ್ರಸಿದ್ಧರಾದ ಆಂಧ್ರ ಭಾರತಕಾರರ ಗ್ರಂಥಗಳಿಂದ ಹಿಡಿದು ಅಲ್ಲಿಯವರೆಗಿನ ಎಲ್ಲ ಪ್ರಾಚೀನ ಗ್ರಂಥಗಳ ಆಧಾರದಮೇಲೆ ರೇಫಅಕಾರಗಳ ಸ್ವರೂಪವನ್ನು ವಿಮರ್ಶೆ ಮಾಡಲಾಗಿದೆ. ಮೇಲೆಯೇ ತಿಳಿಸಿರುವಂತೆ ಈ ಸೀಸಕವಿಯು ತನ್ನನ್ನು ಅನ್ನಯ್ಯ, ತಿಮ್ಮನಾರ್ಯ, ತಿಮ್ಮಯ್ಯ ತಿಮ್ಮಯ, ತಿರುಮಲಾರ್ಯ, ತಿರುಮಲಯ್ಯಂಗಾರ್ ಎಂದು ಸಂಬೋಧಿಸಿಕೊಂಡಿದ್ದಾರೆ. ಇವರ ಒಂದೊಂದು ತಾಮ್ರಪಟದ ಮೊದಲಿನಲ್ಲಿಯೂ 'ತಿ ಆ' ಅಥವಾ 'ಪೆ.ತಿ.ಚಾ' ಎಂದು ಗುರುತು ಮಾಡಿದೆ. ಇದು ತಿರುಮಲ ಅಯ್ಯಂಗಾರ್ ಮತ್ತು ಪೆದ್ದ ತಿರುಮಲ ಆಚಾರ್ಯ ಎಂಬುದರ ಸಂಕ್ಷಿಪ್ತರೂಪ. ಇವರ ಮಕ್ಕಳಾದ ಚಿನ್ನ ತಿರುವೆಂಗಡಾಚಾರ್ಯರು ತಮ್ಮ 'ಅಷ್ಟಮಹಿಷೀ ಕಲ್ಯಾಣ'ದಲ್ಲಿ ತಮ್ಮ ತಂದೆಯವರಾದ ತಿರುಮಲಾರ್ಯರು ವೇದಾಂತ ವಿದ್ವಾಂಸರಾಗಿದ್ದು ದ್ವಿಪದೀ ಛಂದಸ್ಸಿನಲ್ಲಿ 'ಆಂಧ್ರ ವೇದಾಂತಮು'. 'ಹರಿವಂಶಮು', 'ಚಕ್ರವಾಳಮಂಜರಿ', 'ರೇಫ ಅಕಾರಮು' ಮೊದಲಾದಗ್ರಂಥಗಳನ್ನು ರಚಿಸಿದ್ದಾರೆಂದು ತಿಳಿಸಿದ್ದಾರೆ. ಇವುಗಳಲ್ಲಿ ನಾಲ್ಕುಮಾತ್ರ ತಾಮ್ರಪಟಗಳಲ್ಲಿ ಕೆತ್ತಲ್ಪಟ್ಟಿವೆ. ಮೊದಲೆರಡು ಗ್ರಂಥಗಳ ವಿಷಯ ಏನೂ ತಿಳಿಯದು.

ಅಹೋಬಿಲದ ಮೇಲುಬೆಟ್ಟದ ನರಸಿಂಹಸ್ವಾಮಿ ದೇವಾಲಯದಲ್ಲಿ ಬೃಹದಾಕಾರದ ತಾಮ್ರಪಟಗಳಿರುವಂತೆ ತಿಳಿದು ಬರುತ್ತದೆ. ಅದರಲ್ಲಿ ಲಿಖಿತವಾಗಿರುವ ಭಕ್ತಿಗೀತಗಳು ಶೃಂಗಾರ ಮತ್ತು ದಾರ್ಶನಿಕ ವಿಷಯಗಳಿಗೆ ಸಂಬಂಧಪಟ್ಟು ಅನ್ನಮಾರ್ಯ ಮತ್ತು ಅವರ ಪುತ್ರರಾದ ತಿರುಮಲಾರ್ಯದಿಂದ ರಚಿತವಾಗಿ ವೆಂಕಟೇಶನಿಗ ಅರ್ಪಿತವಾಗಿವೆ ಇದರಿಂದ ಈ ತಂದೆಮಕ್ಕಳು ತಿರುಮಲೆಯಲ್ಲಿರುವ ಸಂಕೀರ್ತನೆಗಳನ್ನೇ ಅಲ್ಲದೆ ಇತರ ಕೀರ್ತನೆಗಳನ್ನು ರಚಿಸಿದ್ದಾರೆಂಬುದು ಸ್ಪಷ್ಟ. ಇವು ಅಹೋಬಿಲ ನೃಸಿಂಹಾಲಯಕ್ಕೆ ಸ್ಥಳಾಂತರಿಸಲ್ಪಟ್ಟು ಈಗಲೂ ಅಲ್ಲಿಯೇ ಇವೆ

ಅನ್ನಮಾರ್ಯರ ಪೌತ್ರರೂ ಪೆದ್ದತಿರುಮಲಾಚಾರ್ಯರ ಪುತ್ರರೂ ಆದ, ಚಿನ್ನತಿರುಮಲಾಚಾರ್ಯರು 'ಆಧ್ಯಾತ್ಮಸಂಕೀರ್ತನಮು' 'ಶೃಂಗಾರ ಸಂಕೀರ್ತನಮು' 'ಅಷ್ಟಭಾಷಾದಂಡಕಮು' ಮತ್ತು 'ಸಂಕೀರ್ತನ ಲಕ್ಷಣಮು' ಎಂಬ ಗ್ರಂಥಗಳ ಕರ್ತೃ. ಮೊದಲೆರಡು ಅವರ ತಂದೆ ಮತ್ತು ತಾತಂದಿರ ಗ್ರಂಥಗಳ ಮಾದರಿಯವು ಅಷ್ಟಭಾಷಾಲಕ್ಷಣಮು ವೆಂಕಟಾದ್ರೀಶ್ವರನಾದ ವೆಂಕಟೇಶನ ಸ್ತುತಿ ರೂಪವಾದುದು. ಇದು ಸಂಸ್ಕೃತ ಮತ್ತು ಇತರ ಏಳು ಪ್ರಾಕೃತಭಾಷೆಗಳಲ್ಲಿ ರಚಿತವಾಗಿದೆ. ಗ್ರಂಥಾಂತರದಲ್ಲಿ ಕವಿಯು ತನ್ನ ಪಿತಾಮಹರಾದ ಅನ್ನಮಾರ್ಯರ ಕವಿತೆಗಳು ವಾಣಿಯ ವೀಣೆಯಂತೆ ಮಧುರವೂ ಸರಸ್ವತಿಯ ಸವಿನುಡಿಯಂತೆ ಸರಳವೂ ತಮ್ಮ ತಂದೆಯಾದ ತಿರುಮಲಾಚಾರ್ಯರ ಕವಿತೆಗಳು ಆದಿಶೇಷನ ಫಣಾಮಣಿಯಂತೆ ತೇಜೋಯುಕ್ತವೂ ಆಗಿರುವಂತೆ ತಿಳಿಸಿದ್ದಾರೆ. ಕೊನೆಯಲ್ಲಿ ಅಷ್ಟಭಾಷಾದಂಡಕವು ಮೂರುತಾಮ್ರಪಟಗಳಲ್ಲಿ ಹೇವಿಳಂಬಿ ಸಂವತ್ಸರದ ಮಾರ್ಗಶೀರ್ಷ ಶುದ್ಧ ಪಂಚಮಿಯಂದು (೧೫-೧೧-೧೫೩೭) ನಿಕ್ಷಿಪ್ತವಾಯಿತೆಂದು ತಿಳಿಸಿದೆ. ಈ ದಂಡಕವು ಗ್ರಂಥಕರ್ತನಿಗೆ ಆರು ಪ್ರಾಕೃತಭಾಷೆಗಳಲ್ಲಿ ಪಾಂಡಿತ್ಯವಿತ್ತೆಂಬುದನ್ನು ಸೂಚಿಸುತ್ತದೆ.

'ಸಂಕೀರ್ತನ ಲಕ್ಷಣವು' ಮೇಲೆಯೇ ತಿಳಿಸಿರುವಂತೆ ಅವರ ಪಿತಾಮಹರಾದ ಅನ್ನಮಾರ್ಯರು ಸಂಸ್ಕೃತದಲ್ಲಿ ರಚಿಸಿದ್ದ ಅದೇ ಹೆಸರಿನ ಗ್ರಂಥದ ತೆಲುಗು ಭಾಷಾನುವಾದ. ಇದರಲ್ಲಿ ಚಿನ್ನ ತಿರುಮಲಾರ್ಯರು ತಂದೆಯ ಹಿರಿಯಮಗನೆಂದೂ ತಮ್ಮ ಹೆಸರು ಚಿನ್ನ ತಿಮ್ಮಯ್ಯನೆಂದೂ ಹೇಳಿಕೊಂಡಿದ್ದಾರೆ. ಇವರ ಗ್ರಂಥಗಳು ಲಿಖಿತವಾಗಿರುವ ತಾಮ್ರಪಟಗಳಲ್ಲಿ 'ಚಿ ತಿ.' ಎಂಬ ಅಕ್ಷರಗಳಿವೆ. ಮುಂದೆ ಬಂದ ಚಿನ್ನತಿರುವೆಂಗಳನಾಥನು ಇವರಿಗೆ ಅಷ್ಟಭಾಷಾಚಕ್ರವರ್ತಿಯೆಂಬ ಬಿರುದಿದ್ದಿತೆಂದು ತಿಳಿಸಿದ್ದಾನೆ.

ಮುಂದಿನ ತೆನಾಲಿ ರಾಮಕೃಷ್ಣ ಮೊದಲಾದವರಿಂದ ಚಿನ್ನಣ್ಣ ಅಥವಾ ಚಿನ್ನ ತಿರುವೆಂಗಡನಾಥರು ದ್ವಿಪದೀಕಾವ್ಯರಚನೆಯಲ್ಲಿ ಎತ್ತಿದ ಕೈಯೆಂದೂ ಪೆದ್ದತಿರುಮಲಯ್ಯಂಗಾರ್ಯರು ಪದಕವಿತೆಯಲ್ಲಿ ನಿಪುಣರೆಂದೂ, ತಿರುಮಲಯ್ಯಂಗಾರ್ಯರ ಬಲ ತಮ್ಮನಾದ ನರಸಿಂಗಣ್ಣನು ಪದ್ಯಗದ್ಯಕಾವ್ಯರಚನೆಯಲ್ಲಿ ನಿಷ್ಣಾತನೆಂದೂ ತಿಳಿದುಬರುತ್ತದೆ. ನರಸಿಂಗನ ಗ್ರಂಥವಾವುದೆಂಬುದು ತಿಳಿದುಬಂದಿಲ್ಲ. ಅಷ್ಟಮಹಿಷೀ ಕಲ್ಯಾಣದಲ್ಲಿ ದೊಡ್ಡತಿರುಮಲಾಚಾರ್ಯರು ಸಂಗೀತದಲ್ಲೂ ವೇದಾಂತದಲ್ಲೂ ಪೂರ್ಣಪಂಡಿತರೆಂದು ತಿಳಿಸಿದೆ. ಅದೇ ಗ್ರಂಥದಲ್ಲಿ ಚಿನ್ನಣ್ಣನು ಒಂದೇ ದಿನದಲ್ಲಿ ಒಂದು ಸಾವಿರ ದ್ವಿಪದಿಗಳನ್ನು ರಚಿಸುವ ಶಕ್ತಿಯುಳ್ಳವನೆಂದು ಉಕ್ತವಾಗಿದೆ. ಚಿನ್ನಣ್ಣನು ತಮಗೆ 'ಕವಿಶಿರ ಕಂಪಯೋನ್ಯ ಪ್ರತಿದ್ವಿಪದ ನವಬಿರುದಾಂಕ' ಎಂಬ ಬಿರುದಿತ್ತೆಂದು ಹೇಳಿಕೊಂಡಿದ್ದಾರೆ. ತಮ್ಮ ಕಾವ್ಯವನ್ನು ವೆಂಕಟೇಶನಿಗೆ ಅರ್ಪಿತಮಾಡಿದುದರಿಂದ ತೃಪ್ತನಾದ ವೆಂಕಟೇಶನು ತಮಗೆ ಅತಿ ಶ್ರೇಷ್ಠವಾದ ಮಕರ ಕುಂಡಲಗಳನ್ನು ದಯಪಾಲಿಸಿದುದಾಗಿ ತಿಳಿಸಿದ್ದಾರೆ. ಈ ಚಿನ್ನಣ್ಣನೇ ಮಮ್ಮಟನ ಸಂಸ್ಕೃತದ ಅಲಂಕಾರ ಕಾವ್ಯವಾದ 'ಕಾವ್ಯಪ್ರಕಾಶ'ಕ್ಕೆ ಸುಧಾನಿಧಿಯೆಂಬ ಲೀಲೆಯನ್ನು ಅಮರಸಿಂಹನ ನಾಮಲಿಂಗಾನುಶಾಸನಕ್ಕೆ 'ಬಾಲಪ್ರಬೋಧಿಕಾ' ಎಂಬ ಟೀಕೆಯನ್ನು ರಚಿಸಿರುವಂತೆ ತಿಳಿದುಬರುತ್ತದೆ. ಈ ಕುಂಡಲದ ವಿಷಯವು ಅಣ್ಣಮಾರ್ಯರ ದೌಹಿತ್ರರಾದ ರೇವಣೂರಿ ವೆಂಕಟಯ್ಯನಿಂದ ಅನುಮೋದಿತವಾಗಿದೆ. ವೆಂಕಟಯ್ಯನು ತಿರುಮಲ ಕೊಂಡಯ್ಯನ ಮಗ, 'ಶಕುಂತಲಾ ಪರಿಣಯ' ಎಂಬ ಗ್ರಂಥವನ್ನು ರಚಿಸಿ ವೆಂಕಟೇಶನಿಗೆ ಅರ್ಪಿಸಿದ್ದಾನೆ. ಈ ಗ್ರಂಥದಲ್ಲಿ ವೆಂಕಟೇಶನು ಅನ್ನಮಾರ್ಯರ ಕೃತಿಗಳಿಂದ ತೃಪ್ತನಾಗಿರುವಂತೆಯೂ 'ಅದನ್ನು ಕೇಳಿದ್ದ ಕಿವಿಗಳಲ್ಲಿ ಮತ್ತಾವ ಕೀರ್ತನೆಗಳನ್ನು ಕೇಳುವುದಿಲ್ಲ,' ವೆಂದು ವಾಗ್ದಾನಮಾಡಿರುವನೆಂದೂ ಅವರಿಂದ ಮೂರು ತಲೆಯವರೆಗೆ ಪ್ರತ್ಯಕ್ಷಸಂದರ್ಶನ ಕೊಡುವನೆಂದೂ ಸಪ್ತಪೌರುಷದವರೆಗೆ ಮೋಕ್ಷಪ್ರದಾನ ಮಾಡುವನೆಂದೂ ತಿಳಿಸಿರುವುದಾಗಿ ಉಕ್ತವಾಗಿದೆ. ಅನ್ನಮಾಚಾರ್ಯರ ಐವರು ಮೊಮ್ಮಕ್ಕಳಾದ ಚಿನ್ನತಿರುಮಲದೀಕ್ಷಿತ, ಅಣ್ಣಮಾಚಾರ್ಯ, ತಿರುವೇಂಗಡನಾಥ, (ಕೋನೇಟಿ), ತಿರುವೆಂಗಲನಾಥ ಮತ್ತು ವೆಂಕಟಾಚಾರ್ಯರಿಗೆ ವೆಂಕಟೇಶನು ಪರಮಕರುಣೆಯಿಂದ ಗೌರವಾರ್ಥವಾಗಿ ಮುತ್ತಿನಛತ್ರಿ, ಮಕರಕುಂಡಲ, ದೀವಿಟಿಗೆ, ನಿಲುವಂಗಿ ಮೊದಲಾದುವನ್ನು ಅನುಗ್ರಹಿಸಿ ಅವರನ್ನು ಕೃಷ್ಣನು ಪಾಂಡವರನ್ನು ರಕ್ಷಿಸಿದಂತೆ ರಕ್ಷಿಸುತ್ತಿದ್ದಾನೆ ಎಂದು ಅದೇ ಗ್ರಂಥದಲ್ಲಿ ತಿಳಿಸಿದೆ. ಈ ತಾಳ್ಳಪಾಕಂ ಮನೆತನದವರಿಗೆ ತಮ್ಮ ಸಮಸ್ತ ಶಕ್ತಿಯೂ ವೆಂಕಟೇಶಾನುಗ್ರಹದಿಂದ ಪ್ರಾಪ್ತವಾದುದೆಂದು ದೃಢವಾದ ನಂಬಿಕೆ. ವೆಂಕಟೇಶನು ಅನ್ನಮಾರ್ಯರ ಅಳಿಯನೆಂದೂ ಅಲಮೇಲ್ ಮಂಗೈಯು ಈ ಮನೆತನದ ಕನ್ಯೆಯೆಂದೂ ಉಕ್ತವಾಗಿರುವ ಅಭಿಪ್ರಾಯವನ್ನು ಸಾರ್ಥಕ

ಪಡಿಸುವುದಕ್ಕಾಗಿಯೇ ತಿರುವೇಂಗಡಮುಡೈಯಾನೆನಿಗೂ ಗೋವಿಂದ ರಾಜನಿಗೂ ವೈವಾಹಿಕೋತ್ಸವ (ಕಲ್ಯಾಣೋತ್ಸವ) ವನ್ನು ಪ್ರಾರಂಭಿಸಿ ನಡಸಿಕೊಂಡು ಬರುತ್ತಿದ್ದಾರೆ. ಪೆದ್ದ ತಿರುಮಲಾಚಾರ್ಯರ ಕೀರ್ತನೆಗಳನ್ನು ಕೇಳಿ ಆನಂದಗೊಂಡ ವೆಂಕಟೇಶನು ಅವರೊಡನೆ ನಾಟ್ಯವಾಡಲು ಪ್ರಾರಂಭಿಸಿದನೆಂಬ ಉಕ್ತಿಯೂ ಉಂಟು. ಇದು ಸಂಗೀತ ಸಾಹಿತ್ಯಪ್ರಪಂಚದಲ್ಲಿ ಅವರಿಗಿದ್ದ ನೈಪುಣ್ಯವನ್ನು ಪ್ರಕಟಿಸುತ್ತದೆ.

ತಿರುಮಲೆ ದೇವಸ್ಥಾನದ ಅನೇಕ ಶಾಸನಗಳು ಈ ಮನೆತನದವರಿಗೂ ದೇವಸ್ಥಾನಕೂ ಇದ್ದ ನಿಕಟಸಂಬಂಧವನ್ನು ವಿಶದಪಡಿಸುತ್ತವೆ. ಅನ್ನಮಾಚಾರ್ಯರ ವಿಷಯಕವಾದ ಯಾವ ಶಾಸನವೂ ಉಪಲಬ್ಧವಲ್ಲ. ತಿರುಮಲಾರ್ಯ ಮತ್ತು ಚಿನ್ನಣ್ಣನ ವಿಷಯಕವಾದ ಅನೇಕ ಶಾಸನಗಳಿವೆ. ಅವುಗಳಲ್ಲಿ ಬಹು ಸಂಖ್ಯಾಕವಾದುವು ತಿರುಮಲಾಚಾರ್ಯರಿಗೆ ಸಂಬಂಧಪಟ್ಟವು. ಸಂಕೀರ್ತನ ಭಂಡಾರವನ್ನು ಸ್ಥಾಪಿಸಿದವರೇ ಇವರು. ಈ ದೇವಸ್ಥಾನಕ್ಕೆ ಸಂಬಂಧಿಸಿದಂತೆ ಬಹುಮುಖಸೇವೆಯನ್ನು ಏರ್ಪಸಿದ್ದಾರೆ. ಇವರಿಗೂ ವಿಜಯನಗರದರಸುಗಳಿಗೂ ನಿಕಟಸಂಬಂಧವಿತ್ತು. ಅವರಿಂದ ಅನೇಕಗ್ರಾಮ ಭೂಮಿಗಳನ್ನು ಪಡೆದು ಅವನ್ನೆಲ್ಲ ವೆಂಕಟೇಶನ ಸೇವೆಗಾಗಿ ಅರ್ಪಿಸಿದ್ದಾರೆ. ಅನೇಕಸೇವೆಗಳಿಗೆ ಸ್ವಂತವಾಗಿ ಬಹುಪ್ರಮಾಣದ ದ್ರವ್ಯದಾನಮಾಡಿದ್ದಾರೆ. ರಾಜರುಗಳಿಗೂ ಅವರ ಸಾಮಂತರಿಗೂ ಸಲ್ಲಬೇಕಾದ ಸೇವಾರ್ಥಗಾರರ ಭಾಗದ ಪ್ರಸಾದಗಳನ್ನು ಅಪಾರವಾದ ದ್ರವ್ಯಕ್ಕೆ ಕೊಂಡುಕೊಂಡು ಅವುಗಳನ್ನು ಮಠಸತ್ರಗಳ ಉಪಯೋಗಕ್ಕೆ ಕೊಟ್ಟಿದ್ದಾರೆ. ನಿತ್ಯನೈಮಿತ್ತಿಕ ಪೂಜಾಕಾಲಗಳಲ್ಲಿ ನೈವೇದ್ಯಕ್ಕೆ ಏರ್ಪಡಿಸಿದ್ದಾರೆ. ಪುಳಿಕಾಪ್ಪುನೇತಿ, ಅಧ್ಯಯನೋತ್ಸವಗಳಿಗೆ ಸಹಾಯ ಮಾಡಿದ್ದಾರೆ. ಹೊಸ ಬ್ರಹ್ಮೋತ್ಸವವನ್ನು (ತಿರುಕ್ಕುಡಿ ತಿರುನಾಳ್) ಪ್ರಾರಂಭಿಸಿದ್ದಾರೆ. ತಿರುಮಲೆಯಲ್ಲಿ ರುವ ಸ್ವಾಮಿಪುಷ್ಕರಿಣಿಗೆ ಸೋಪಾನವನ್ನು ಕಟ್ಟಿಸಿ ನೀರಾಳಿಮಂಟಪವನ್ನು ನಿರ್ಮಾಣ ಮಾಡಿದುದಕ್ಕೆ ಶಾಸನಾಧಾರವಿದೆ. ಈ ಪುಷ್ಕರಿಣಿಯ ಮೇಲಿರುವ ವರಾಹಸ್ವಾಮಿಯವರ ದೇವಸ್ಥಾನಕ್ಕೆ ಪ್ರಾಕಾರವನ್ನು ಪ್ರದಕ್ಷಿಣ ಮಂಟಪವನ್ನು ಕಟ್ಟಿಸಿದವರೂ ಇವರೇ. ವನಭೋಜನವನ್ನೇರ್ಪಡಿಸಿದರು, ಸಂಕೀರ್ತನೆಗಳನ್ನು ಹಾಡಲು ಶ್ರೀ ವೈಷ್ಣವರನ್ನು ಗೊತ್ತುಮಾಡಿದರು. ಇವರು ಕುಲಶೇಖರಪುರವೆಂಬ ಬಡಾವಣೆಯಲ್ಲಿ ವಾಸವಾಗಿದ್ದು 'ಆಳ್ವಾರ್‌ತೀರ್ಥ'ದ ಬಳಿ ಒಂದು ಮಂಟಪವನ್ನು ಕಟ್ಟಿಸಿ, ಅಲ್ಲಿ ಲಕ್ಷ್ಮೀನಾರಾಯಣ ಸ್ವಾಮಿಯನ್ನು ಪ್ರತಿಷ್ಠೆಮಾಡಿದರು. ಅಲ್ಲಿಯೇ ನಮ್ಮಾಳ್ವಾರರಿಗೆ ರಥೋತ್ಸವವನ್ನು ಅಧ್ಯಯನೋತ್ಸವವನ್ನು ಏರ್ಪಡಿಸಿದರು.

ಚಿನ್ನತಿರುಮಲಾಚಾರ್ಯರು ಅಲಮೇಲು ಮಂಗಾಪುರದಲ್ಲಿ ಕಲ್ಯಾಣ ವೆಂಕಟೇಶ್ವರಸ್ವಾಮಿಯ ಗುಡಿಯನ್ನು ಜೀರ್ಣೋದ್ಧಾರಮಾಡಿದರು ಈ ಗುಡಿಯು ವೆಂಕಟೇಶ್ವರನಿಗೂ ಅಲರ್ಮೇಲ್ ಮಂಗೆಗೂ ವಿವಾಹನಡೆದ ಸಂದರ್ಭದಲ್ಲಿ ಕಟ್ಟಿದುದೆಂದು ಪ್ರತೀತಿ. ಈ ದೇವಸ್ಥಾನದಲ್ಲಿ ನಾಚ್ಚಿಯಾರ್, ಅನಂತ, ಗರುಡ, ವಿಷ್ವಕ್ಸೇನ ಆಳ್ವಾರ್, ಆಚಾರ್ಯರು, ಅನ್ನಮಾಚಾರ್ಯ– ಮೊದಲಾದವರ ವಿಗ್ರಹಗಳನ್ನು ಸ್ಥಾಪಿಸಿದರು. ಅವರ ನಿತ್ಯನೈಮಿತ್ತಿಕ ಆರಾಧನೆಗೆ ಏರ್ಪಡಿಸಿದರು. ಇದನ್ನು ತಿಳಿಸುವ ಶಾಸನದ ಕಾಲ ಶಕ ೧೪೬೨ ಅಥವಾ ಕ್ರಿ. ಶ. ೧೫೪೦. ಕ್ರಿ. ಶ. ೧೫೪೭ರ ಶಾಸನವೊಂದರಲ್ಲಿ ಇವರು ಅಯ್ದು ದಿನಗಳ ಕಲ್ಯಾಣೋತ್ಸವವನ್ನು ಪ್ರಾರಂಭಿಸಿದುದು ಉಕ್ತವಾಗಿದೆ.

ಒಟ್ಟನಲ್ಲಿ ತಾಳ್ಳಪಾಕಂ ಮನೆತನದವರು ವೆಂಕಟೇಶನ ಪರಮ ಭಕ್ತರಾಗಿ ಅವನಿಗೆ ಅನೇಕ ಸೇವೆಗಳನ್ನು ಮಾಡಿರುವುದಲ್ಲದೆ ಸಂಗೀತಸಾಹಿತ್ಯ ಪ್ರಪಂಚದಲ್ಲಿ ಅನ್ಯಾದೃಶ್ಯವಾದ ಕೃತಿಗಳನ್ನು ರಚಿಸಿ ಚಿರಸ್ಥಾಯಿಯಾಗಿದ್ದಾರೆ.

---



# ಗೃಹಲಕ್ಷ್ಮಿ





ಭರತ ಭುವಿಯಲಿ ಜನಿಸಿ । ಭಕ್ತಿಪಥದಲಿ ನಡೆದು
ಕೃಷ್ಣನನಾರಾಧಿಸುತ । ಅಮರತೆಯ ತಾಳಿರುವ
ಅಮರ ಮೀರಾಬಾಯಿ । ಕಥೆಯನ್ನು ಆಲಿಸಿ
ಅವಳಂತೆ ಭಜಿಸುತಲಿ । ಜನುಮ ಸಾಫಲ್ಯಗೊಳಿಸಿ ॥ ಪ ॥

ಸಂತಾನ ಕುಡಿಯಿರದೆ । ಹಗಲಿರುಳು ಚಿಂತಿಸುತ
ದೈವದಲಿ ಮೊರೆಯಿಟ್ಟ । ರಾಜದಂಪತಿಗಳಲಿ
ಮುದ್ದು ಮಗುವಾಗುದಿಸಿ । 'ಮೀರೆ' ನಾಮಾಂಕಿತದಿ
ಬೆಳೆದು ಬೆಳಗುತಲಿರ್ದು । ಅಮರಳಾದಳು ಮೀರಾ ॥ ೧ ॥

ಬಾಲ್ಯದಲೆ ಧ್ರುವನೊಲು । ಕರುಣಾಳು ದೇವರನು
ನಮಿಸಿ ಪೂಜಿಸಿ ನಿತ್ಯ । ಭಕ್ತಿಯಿಂ ಭಜಿಸುತಲಿ
ಮೈಮರೆತು ಕುಣಿದಾಡಿ । ತಂದೆ ಮನ ತಣಿಸುತಲಿ
ಮಮತೆಯಾ ಕುಡಿಯಾಗಿ । ಅಮರಳಾದಳು ಮೀರಾ ॥ ೨ ॥

ಗುರುವಬಳಿ ವಿದ್ಯೆಯನು । ಅತಿವೇಗದಲಿ ಕಲಿತು
ಕೆಲವರ್ಷ ಕಲಿಕೆಯಲಿ । ಪುರಾಣವ ಪಠಿಸುತಿರೆ
ಶಬರಿ ಗೋಪಿಯರ ಕಥೆ । ಮನವನಾಕರ್ಷಿಸಲು
ಭಕ್ತಿಯಂಕುರವಾಗಿ । ಅಮರಳಾದಳು ಮೀರಾ ॥ ೩ ॥

ಮದುಮಗನ ಮೆರವಣಿಗೆ । ಬಂದು ಹೋದುದ ಕಂಡು
ತನಗೋರ್ವ ಮದುಮಗನು । ಬೇಕೆಂದು ಯಾಚಿಸಲು
ಕೃಷ್ಣನಾ ಪ್ರತಿಮೆಯನು । ತಂದೆ ಕೊಡೆ ಸಂತಸದಿ
ಅದರೊಡನೆ ನಲಿಯುತಲಿ । ಅಮರಳಾದಳು ಮೀರಾ ॥ ೪ ॥

ತನ್ನ ಸಿರಿಗೂ ಅಧಿಕ । ಮಾಧವನ ಪ್ರೀತಿಸುತ
ಮನನಿಲಿಸುತವನಲ್ಲೆ । ಆಡಿ ಹಾಡುತಲಿರಲು
ಪತಿಭಾವ ಒಡಮೂಡಿ । ಭಕ್ತಿರೂಪವತಳೆದು
ಸಫಲತೆಗೆ ಸಹಕರಿಸಿ । ಅಮರಳಾದಳು ಮೀರಾ ॥ ೫ ॥

ಮದುವೆ ಕಜ್ಜಗಳೆಲ್ಲ ! ಜರುಗುತಿರಲದ ಕಂಡು
ಭರ್ತನೊಲು ಕೃಷ್ಣನನೆ । ಪಡೆದಿರುವೆನೆಂದೆನಲು
ಲೋಕ ಕರ್ತವ್ಯವಿದು । ಬಿಡದೆ ನಡೆಯೆಂದೆನಲು
ತಂದೆ ನುಡಿಗನುಮತಿಸಿ । ಅಮರಳಾದಳು ಮೀರಾ ॥ ೬ ॥

ಪರಿಣಯದ ನಂತರವೆ । ಪತಿರಾಯನೊಡಗೂಡಿ
ಕೃಷ್ಣ ವಿಗ್ರಹಪಿಡಿದು । ಗೃಹವ ಸೇರಲು ಅತ್ತೆ
ಶಕ್ತಿ ಪೂಜಕರು ನಾವು । ವಿಗ್ರಹವ ಬಿಸುಡೆನಲು
ದಿಟ್ಟತನದಿಲ್ಲೆನುತ ! ಅಮರಳಾದಳು ಮೀರಾ ॥ ೭ ॥

ಸೊಸೆಯನುಡಿ ಕೇಳುತಲೆ । ಅತ್ತೆಯತಿ ರೋಷದಲಿ
ಮನೆಯೊಳಡಿ ಇಡುವುದಕು । ತಗದವಳು ನೀನೆಂದು
ಅನ್ಯಗೃಹದಿರಿಪಂತೆ । ಆಜ್ಞೆಗೈಯ್ಯಲು ಕಂಡು
ಮನದಿ ಹರಿಯನು ನುತಿಸಿ । ಅಮರಳಾದಳು ಮೀರಾ ॥ ೮ ॥

ಅಡಚಣೆಯದೊಂದಿರದ । ಭವ್ಯಭವನದಿ ನೆಲಸಿ
ಹಗಲಿರುಳು ಮಾಧವನ । ಎಡಬಿಡದೆ ಧ್ಯಾನಿಸುತ
ಲೌಕಿಕದ ಸುಖಮರೆತು । ದೈವತ್ತ್ವದಲಿ ಬೆರೆತು
ಸಂತಸದಿ ಬದುಕೆಳೆದು । ಅಮರಳಾದಳು ಮೀರಾ ॥ ೯ ॥

ಸತಿಯ ಅಗಲಿಕೆಯಿಂದ । ಬೇಸತ್ತು ಯುವರಾಜ
ಇರುಳಿನಲ್ಲೊಂದು ದಿನ । ಸತಿಗೃಹಕೆ ಬರುತಿರಲು
ಗಾನನಾಟ್ಯಗಳದನಿ । ಕೇಳಿಬರಲದಕಂಡು
ಅಚ್ಚರಿಯ ಗೊಳುತಲಿರೆ । ಅಮರಳಾದಳು ಮೀರಾ ॥ ೧೦ ॥




ಹೊರದ್ವಾರ ಬಳಿನಿಂತು । ಪ್ರಾರ್ಥನೆಯ ಕೇಳುತ್ತ
ಏಕಾಕಿ ಸತಿಯೊಡನೆ । ಆರಿಹರೊ ಪರಿಕಿಸಲು
ಶಂಕೆರೋಷಗಳೊಡನೆ । ಒಳ ಹೊಕ್ಕ ಪತಿಮನವ
ವಿಸ್ಮಯದ ಜಗಕೆಳಸಿ । ಅಮರಳಾದಳು ಮೀರಾ ॥ ೧೧ ॥

ಕಾಮದಾಹದಿ ಬೆಂದ । ಅರಸುಮನಕಲ್ಪವೂ
ಶಾಂತಿಸುಖ ಸಿಗದಿರಲು । ರೋಷದಾವೇಶದಲಿ
ಚಿರಸುಖದಿ ನಲಿಯುತಿಹ । ಸತಿಯ ನಿಂದಿಸುತಲಿರೆ
ಕನಿಕರದಿ ಕಣ್ತೆರೆದು ಅಮರಳಾದಳು ಮೀರಾ ॥ ೧೨ ॥

ಅಂತರದ ಲೋಕದಿಂ । ಹೊರ ಲೋಕಕೆ ಬಂದು
ಪತಿಪದಕೆ ನಮಿಸುತಲಿ । ಅತಿವಿನಯ ನುಡಿಗಳಲಿ
ಹೃದಯೇಶನನು ಬಿಟ್ಟು । ನಲಿಯೆನಾರೊಡೆನುತ
ಶಾಂತದಿಂದುತ್ತರಿಸಿ । ಅಮರಳಾದಳು ಮೀರಾ ॥ ೧೩ ॥

ಕರೆತಂದು ನೆಲೆಯಿತ್ತ । ನಾನೆಯಿಲ್ಲಿರುವಲ್ಲಿ
ಮತ್ತಾವ ಹೃದಯೇಶ । ಇಹನು ನಿನಗಿಲ್ಲೆನಲು
ಕ್ರೋಧ ನುಡಿಗಂಜದಲೆ । ದೇಹಕೊಡೆಯರು ನೀವು
ತನುವ ದಂಡಿಸಿರೆನುತ । ಅಮರಳಾದಳು ಮೀರಾ ॥ ೧೪ ॥

ರಸಿಕ ಕವಿರಾಜ ತಾ । ಸತಿಯ ಮಹಪ್ರೇಮಕೆ
ವಿವೇಕದೆ ಮನಸೋತು । ಸಂಶಯವ ಹೊರದೂಡಿ
ಭಜನೆ ಕೀರ್ತನೆ ಮುಂದೆ । ಮಂದಿರದೆ ನಡೆಯಲಿ
ಎಂದಾಣತಿಯನೀಯೆ । ಅಮರಳಾದಳು ಮೀರಾ ॥ ೧೫ ॥

ಅರಮನೆಯ ಮುಂದಿರುವ । ದೇವ ಮಂದಿರದಲ್ಲಿ
ದೈವವನು ಸ್ಥಾಪಿಸಿ ॥ ದಿನವು ಕೀರ್ತಿಸುತಿರಲು
ಭಕ್ತಿರಸ ಪಾನಕೆ । ಭಕ್ತವೃಂದವೆ ನೆರೆದು
ಸಂತಸದೆ ನಲಿಯುತಿರೆ । ಅಮರಳಾದಳು ಮೀರಾ ॥ ೧೬ ॥

ಕಸ್ತೂರಿಯ ಪರಿಮಳವು । ಎಲರಿನಿಂ ಪಸರಿಪೊಲು
ದೈವ ಪ್ರಭೆ ಮಹಿಯಲ್ಲಿ । ಮೀರೆಯಿಂ ಹರಡುತಲಿ
ನಾಡ ದಿಸೆದಿಸೆಗಳಲಿ । ತಾರೆಯೊಲು ಮಿನುಗುತಿರೆ
ನಮಿಸಿ ಹೃದಯೇಶನನು । ಅಮರಳಾದಳು ಮೀರಾ ॥ ೧೭ ॥

ಅಕ್ಬರನಾಸ್ಥಾನದ । ಗಾಯಕನು ತಾನ್‌ಸೇನ್
ಮೀರಗೀತಾಮೃತಕೆ । ಸಂತಸದಿ ಮನದೂಗಿ
ಇಚ್ಛೆಯಲಿ ಕೆಲಕಲಿತು । ರಾಜಸಭೆಯಲಿ ಪಾಡಿ
ಜನದೆಲ್ಲ ಮನಸೆಳೆಯೆ । ಅಮರಳಾದಳು ಮೀರಾ ॥ ೧೮ ॥

ಭಕ್ತಿರಸ ಗಾಯನಕೆ । ವಿಸ್ಮಯಗೊಂಡ ಮಹರಾಜ
ಗಾಯಕನ ಬಳಿಕರೆದು । ಅದರುಗಮ ಕೇಳ್ತಿಳಿದು
ಅರೆನಿಮಿಷ ಚಿಂತನದಿ । ತಂತ್ರವೊಂದನು ಹೂಡಿ
ಹೊರಡಲನುವಾಗುತಿರೆ । ಅಮರಳಾದಳು ಮೀರಾ ॥ ೧೯ ॥

ಮಾರುವೇಷದಿ ಬಂದು । ಭಜನಾಮೃತವ ಸವಿದು
ಬಳಿಹೋಗಿ ಅಂತ್ಯಕೇ । ಭಕ್ತಿಯಲಿ ಅಡಿಗೆರಗಿ
ಕಾಣ್ಕೆರೂಪದಲೊಂದು । ರತ್ನಮಾಲೆಯ ಕೊಡಲು
ದೇವ ಕಂಠಕೆ ಹಾಕಿ । ಅಮರಳಾದಳು ಮೀರಾ ॥ ೨೦ ॥

ಹಾರವಿತ್ತಿಹ ವಿಷಯ । ನಗರವೆಲ್ಲಾ ಹರಡೆ
ರಾಜ ಹಾರವ ತರಿಸಿ । ಪರಿಕಿಸುತಲರಿವಂದು
ಅಕ್ಬರನನದುವೆಂದು । ಸತಿಯಶುದ್ಧಳು ಎಂದು
ಭಾವದಲಿ ನೋಯುತಿರೆ । ಅಮರಳಾದಳು ಮೀರಾ ॥ ೨೧ ॥

ಈ ನೋವು ಅವಮಾನಕ್ಕೆ । ತನ್ನಸತಿ ಕಾರಣ ವೆಂದು
ಹೊನ್ನಬಟ್ಟಲವಿಷವ । ಇತ್ತು ಕುಡಿಯೆಂದೆನಲು
ದೈವವನುನೆನೆಯುತ ಕುಡಿದು । ಮರಳಿ ಭಜನೆಯ ಗೈವ
ಸತಿಯಕಂಡು ಚಕಿತನಿರೆ । ಅಮರಳಾದಳು ಮೀರಾ ॥ ೨೨ ॥

ವಿಷಕುಡಿದು ಪಾಡುತಿಹ । ಸತಿಯು ಕಪಟಿಯು ಎಂದು
ಶಿರವ ಕತ್ತರಿಪುದಕೆ । ಆಜ್ಞೆಮಾಡಲು ಭಟರು
ಸಾಧ್ವಿಮಣಿ ಶಿರವನ್ನು । ಕತ್ತರಿಸಲೊಪ್ಪದೆಯೇ
ಮರಳಿ ನಿಂದಿಸೆ ಕಂಡು । ಅಮರಳಾದಳು ಮೀರಾ ॥ ೨೩ ॥

ಮತ್ತಾತ್ಮಹತ್ಯೆಗೆ । ಆಜ್ಞೆಗೈಯ್ಯಲು ಪತಿಯು
ಆ ಕೃಷ್ಣಪ್ರತಿಮೆಯೊಡೆ । ಗಂಗೆಯುಡಿಯಲಿ ಧುಮುಕೆ
ದೈವಬಲ ರಕ್ಷಿಸೀ । ಕಾರ್ಯಗೈಯ್ಯಲು ಪೇಳೆ
ಅದರಾಜ್ಞೆಯೊಲು ನಡೆದು । ಅಮರಳಾದಳು ಮೀರಾ ॥ ೨೪ ॥

ಮೀರತ್ ನಗರದಿಂ । ಬೃಂದಾವನವ ತಲುಪಿ
ನಿಯುತದೈವವ ನೆನೆದು । ಕೊಂಡಾಡಿ ಪಾಡುತಿರೆ
ಭಕ್ತಕೋಟಿಯು ನೆರೆದು । ರಸಸುಧೆಯ ಸೇವಿಸುತ
ನಿಜಭಕ್ತಿಯಲಿ ಪಾಡೆ । ಅಮರಳಾದಳು ಮೀರಾ ॥ ೨೫ ॥

ಆ ಪುರದೆ ವಾಸಿಸುತ । ದೈವವನು ಸೇವಿಸುತ
ಪೆಣ್ಮೊಗ ನೋಡೆನೆಂದು । ಪ್ರತಿಜ್ಞೆಯಕೈಗೊಂಡ
ಜೀವಗೋಸಾಯಿಗೆ । ಸಂದೇಹ ನೀಗಿಸೀ
ಶಿಷ್ಯನೊಲು ಸ್ವೀಕರಿಸಿ । ಅಮರಳಾದಳು ಮೀರಾ ॥ ೨೬ ॥

ರಾಜ್ಯದೆಲ್ಲೆಡೆಯಲ್ಲು । ಸವಿಕೀರ್ತನೆಯೆ ಮೊಳಗೆ
ತನ್ನ ತಪ್ಪಿಗೆ ರಾಜ । ಮನದಲತಿ ತಪಿಸುತಲಿ
ಕ್ಷಮೆಕೇಳಿ ಅಡಿಪಿಡಿದು । ರಾಜವೈಭವದೊಡನೆ
ಮನೆಗವಳ ಕರೆತರಲು । ಅಮರಳಾದಳು ಮೀರಾ ॥ ೨೭ ॥

ಅಷ್ಟಮಿಯ ದಿನದಂದು । ಬೃಂದಾವನದಿ ಮೀರಾ
ಭಜನೆಗೈಯುತಲಿರಲು । ರಾಜಕಾಲ್ನಡಿಗೆಯಲಿ
ಬರುವುದನೆ ಕಾಣುತಲಿ । ಪತಿಪದಕೆ ನಮಿಸುತಲಿ
ಸತಿಪತಿಗಳೊಂದಾಗೆ । ಅಮರಳಾದಳು ಮೀರಾ ॥ ೨೮ ॥

ದಂಪತಿಗಳೊಟ್ಟಿಗೇ । ಅಚ್ಯುತನ ಪೂಜಿಸೀ
ಅಧಿಕ ವೈಭವದಿಂದ । ನಗರವ ಪ್ರವೇಶಿಸುತ
ಹರುಷದಾನಂದದಲಿ । ಭಜನೆ ಕೀರ್ತನೆ ನಡೆಸಿ
ಗೃಹದಿ ಮೂರ್ತಿಯನಿರಿಸಿ । ಅಮರಳಾದಳು ಮೀರಾ ॥ ೨೯ ॥

ಅಲೌಕಿಕದಿ ಮೈಮರೆತ । ಮೀರೆ ಪತಿರಾಯನಿಗೆ
ರಾಜಪುತ್ರಿಯ ಕೂಡ । ಪರಿಣಯವ ಮುಗಿಸುತಲಿ
ಗೋಪಾಲ ಬಾಲನಲಿ । ತಾನೈಕ್ಯಳಾಗುತಲಿ
ಮುಕ್ತಿರಾಜ್ಯವ ತಲುಪಿ । ಅಮರಳಾದಳು ಮೀರಾ ॥ ೩೦ ॥

**ಶ್ರೀಮತಿ ಪ್ರೇಮಲೀಲ ನಾರಾಯಣಮೂರ್ತಿ**

# ಕಿಶೋರ ಜಗತ್



# ಮುದ್ಗಲ ಮಹರ್ಷಿ

ಮಹರ್ಷಿ ಮುದ್ಗಲ ವೇದ ವಿದ್ಯೆಯನ್ನು ತಿಳಿದ ಒಬ್ಬ ಶ್ರೇಷ್ಠ ಆಚಾರ್ಯನಾಗಿದ್ದ. ಆತನು ದೊಡ್ಡ ತ್ಯಾಗಿ. ಯಾರೊಡನೆಯೂ ಏನನ್ನೂ ಕೇಳುತ್ತಿದ್ದಿಲ್ಲ. ಆತನ ಆಶ್ರಮ ಕುರುಕ್ಷೇತ್ರದಲ್ಲಿತ್ತು. ಆತ 'ಶಿಲಾಂಛ ವೃತ್ತಿ' ಯಿಂದ ಬದುಕುತ್ತಿದ್ದ. ಅಂದರೆ ರೈತರು ಹೊಲದ ಪೈರು ಕತ್ತರಿಸಿದ ನಂತರ ಹೊಲದಲ್ಲಿ ಉದುರಿದ ಕಾಳುಗಳನ್ನು ಆಯ್ದು ಮುದ್ಗಲ ಊಟ ಮಾಡುತ್ತಿದ್ದ. ಗದ್ದೆ, ಹೊಲಗಳಲ್ಲಿ ಬಿದ್ದ ಆ ಕಾಳುಗಳನ್ನು 'ಶಿಲ' ವೆನ್ನುತ್ತಾರೆ. ಆ ಕಾಳುಗಳನ್ನು ಹೆಕ್ಕಿ ಬದುಕುವವರನ್ನು 'ಶಿಲಾದ' ರೆನ್ನುತ್ತಾರೆ. ಇದೇ ರೀತಿ ಪೇಟೆಯಲ್ಲಿ ತೂಗುವಾಗ — ಕೊಂಡುಕೊಳ್ಳುವಾಗ ಕಾಳುಗಳು ಬೀಳುತ್ತವೆ. ಅವುಗಳನ್ನು 'ಉಂಛ' ವೆನ್ನುತ್ತಾರೆ. ಗದ್ದೆಗಳಲ್ಲಿ ಹಾಗೂ ಪೇಟೆ ಬೀದಿಗಳಲ್ಲಿ ಬಿದ್ದ ಕಾಳುಗಳನ್ನು ಹೆಕ್ಕಿ ಬದುಕುವವರಿಗೆ 'ಶಿಲಾಂಛ ವೃತ್ತಿ'ಯಿಂದ ಬದುಕುವರು ಎನ್ನುತ್ತಾರೆ.

ಮಹರ್ಷಿ ಮುದ್ಗಲ ತನ್ನ ಪರಿವಾರದವರನ್ನೂ ಇದೇ ರೀತಿ ಸಾಕುತ್ತಿದ್ದ. ಅಲ್ಲದೆ ೪೩ ಸೇರು ಧಾನ್ಯಕ್ಕಿಂತ ಹೆಚ್ಚು ಸಂಗ್ರಹಿಸುವುದಿಲ್ಲವೆಂಬ ವ್ರತವೂ ಆತನಿಗಿತ್ತು. ತಿಂಗಳಲ್ಲಿ ಅಮಾವಾಸ್ಯೆ ಮತ್ತು ಹುಣ್ಣಿಮೆಗೊಮ್ಮೆ ಮಾತ್ರ ಆತ ಊಟ ಮಾಡುತ್ತಿದ್ದ. ಆತನ ಪರಿವಾರವೂ ಹಾಗೆಯೇ. ಅಡುಗೆಯ ಸಿದ್ಧತೆ ಮಾಡಲು ಬಹಳ ಸಮಯ ಹಾಳಾಗುತ್ತದೆ. ಅದರಿಂದ ಊಟವನ್ನು ಕಡಿಮೆ ಮಾಡಿ ಈ ಸಮಯವನ್ನು ಒಳ್ಳೆಯ ಕೆಲಸ - ದೇವರ ಪೂಜೆಗಳಲ್ಲಿ ತೊಡಗಿಸುವುದು ಉಚಿತವೆಂದು ಮುದ್ಗಲನ ವಿಚಾರ.

ಒಮ್ಮೆ ಹುಣ್ಣಿಮೆಯ ದಿನ ದೂರ್ವಾಸರು ಮುದ್ಗಲನ ಮನೆಗೆ ಬಂದರು. ಸಿಟ್ಟಿನ ಮೂರ್ತಿ ದೂರ್ವಾಸರೆಂಬುದು ತಿಳಿದ ವಿಷಯ. ಆದರೂ ಆತ ಋಷಿ. ಮನೆಗೆ ಬಂದ ಋಷಿಯನ್ನು ಕಂಡು ಮುದ್ಗಲ ಸಂತಸಪಟ್ಟ. ಪ್ರೀತಿಯಿಂದ ಊಟ ಮಾಡಿಸಿದ, ಆ ದಿನ ಅಡಿಗೆಯೆಲ್ಲವನ್ನೂ ದೂರ್ವಾಸರೊಬ್ಬರೇ ಉಂಡರು. ಮುದ್ಗಲನ ಪರಿವಾರ ನೀರು ಕುಡಿದು ಮಲಗಿತು,

ಅಮಾವಾಸ್ಯೆಯ ದಿನ ಪುನಃ ದೂರ್ವಾಸರ ಆಗಮನವಾಯಿತು. ಮಹರ್ಷಿ ಮುದ್ಗಲ ಆ ದಿನವೂ ಅವರನ್ನು ಊಟಕ್ಕೆ ಎಬ್ಬಿಸಿದ. ದೂರ್ವಾಸರ ಊಟ ಸಾಗಿತು. ಮಾಡಿದ ಅಡಿಗೆ ಮುಗಿಯಿತು. ಮುದ್ಗಲನ ಪರಿವಾರ ಉಪವಾಸ ಮಲಗಿತು. ದುರ್ವಾಸರಿಗೆ ಇದಕ್ಕಿಂತ ಪವಿತ್ರವಾದ ಊಟ ಬೇರೆಲ್ಲಿ ಸಿಗಬೇಕು? ಅದಕ್ಕಾಗಿ ಅವರು ಸಲಸಲವೂ ಬರತೊಡಗಿದರು. ಮುದ್ಗಲನ ಪರಿವಾರ ನೀರು ಕುಡಿದು ಮಲಗಿದರೂ ಋಷಿಯ ಸತ್ಕಾರ ನಡೆಯುತ್ತಿತ್ತು. ಒಂದು ಕ್ಷಣಕ್ಕಾದರೂ ಬೇಸರ, ಸಿಟ್ಟು ಅವರಿಗೆ ಬರಲಿಲ್ಲ. ಈ ರೀತಿ ನಿರಂತರವಾಗಿ ಮೂರು ತಿಂಗಳ ಕಾಲ ದೂರ್ವಾಸರ ಊಟ ಸಾಗಿತು. ಆದರೂ ಅಮಾವಾಸ್ಯೆ ಹುಣ್ಣಿಮೆಗಳಿಗೆ ಬರುವ ದೂರ್ವಾಸರಿಗೆ ಆದರದ ಸ್ವಾಗತ ದೊರೆಯುತ್ತಿತ್ತು. ದೂರ್ವಾಸರು ಬೇಕೆಂದೇ ಈ ರೀತಿ ಮಾಡುತ್ತಿದ್ದರು. ಕೊನೆಗೊಂದು ದಿನ ಅವರು ಪ್ರಸನ್ನರಾಗಿ ಹೇಳಿದರು – "ನಾನು ನಿನ್ನ ಬಗೆಗೆ ಪ್ರಸನ್ನನಾಗಿದ್ದೇನೆ. ನಿಜವಾಗಿಯೂ ನೀನು ಸಿಟ್ಟನ್ನು ಗೆದ್ದಿದ್ದೀ. ನೀನು ದೇಹದೊಡನೆ (ಜೀವಂತ) ಸ್ವರ್ಗಕ್ಕೆ ಹೋಗುವಂತೆ ಆಶೀರ್ವದಿಸುತ್ತೇನೆ."

ಈ ವರದಾನದಂತೆ ದೇವರಾಜ ಇಂದ್ರನು ಮುದ್ಗಲನನ್ನು ಕರೆತರಲು ವಿಮಾನ ಕಳುಹಿಸಿದನು. ದೇವದೂತರು ಸಪರಿವಾರ ಸ್ವರ್ಗಕ್ಕೆ ಬರಬೇಕೆಂದು ಪ್ರಾರ್ಥಿಸಿದರು.

ಮುದ್ಗಲ ಹೇಳಿದ –"ಬರುವುದಕ್ಕೇನೂ ಅಡ್ಡಿ ಇಲ್ಲ. ಆದರೆ ನನಗೆ ಸ್ವರ್ಗದ ವಿಶೇಷತೆ ತಿಳಿಯ ಬೇಕಾಗಿದೆ."

ದೇವದೂತರು ಸ್ವರ್ಗದ ಉದ್ದುದ್ದ ವರ್ಣನೆ ಮಾಡಿದರು. ಅಲ್ಲಿ ಸುಖವೇ ಇರುವುದು, ಮಾನವನೆಂದೆಂದಿಗೂ ಯುವಕನಾಗಿಯೇ ಇರುತ್ತಾನೆ. ಮುದಿತನವೇ ಬರುವುದಿಲ್ಲ, ಸಾವೇ ಇಲ್ಲ. ಯಾವ ಕೊರತೆಯೂ ಇಲ್ಲ.

ಮಹರ್ಷಿ ಹೇಳಿದ – "ಯಾವ ರೀತಿಯ ಭಯವೂ ಇಲ್ಲವೇ" ದೇವದೂತ ಉತ್ತರಿಸಿದ. – "ಮನುಷ್ಯ ಮಾಡಿದ ಪುಣ್ಯದ ಸಂಪತ್ತು ಇರುವ ತನಕ ಯಾವ ರೀತಿಯ ಭಯವೂ ಇರುವುದಿಲ್ಲ. ಅದು ಮುಗಿಯುತ್ತಲೇ ಕೆಳಗೆ ಬೀಳಬೇಕಾಗುತ್ತದೆ. ಪುಣ್ಯಾತ್ಮನಾದವಷ್ಟೂ ಸುಖದ ಪ್ರಾಪ್ತಿ ಹೆಚ್ಚು."

'ರಸಿಕ ಪುತ್ತಿಗೆ'

ಋಷಿ ಹೇಳಿದ - "ಹಾಗಾದರೆ ಸುಖ ಕಡಿಮೆ ಇರುವ ಮತ್ತು ಹೆಚ್ಚು ಇರುವವರಲ್ಲಿ ದ್ವೇಷಾಸೂಯೆಗಳು ಬಂದು ಯುದ್ಧಗಳು ಆಗುತ್ತವೆಯಲ್ಲವೇ? ಹಾಗಿರಲು ಅಂಥಲ್ಲಿ ಸುಖವೆಲ್ಲಿ ಬರುವುದು?"

ದೇವದೂತ ನಿರುತ್ತರನಾದ. ಮಹರ್ಷಿ ಮಾತು ಮುಂದುವರಿಸಿ ಹೇಳಿದ. "ಅಲ್ಲಿ ಅಷ್ಟು ಸುಖವಿರುವುದರಿಂದ ಕಡಿಮೆ ಸುಖದವರು ಆ ಕಡೆ ಆಕ್ರಮಣವನ್ನು ಮಾಡುವುದು ಸಹಜ. ನಾನು ಸ್ವರ್ಗಕ್ಕೆ ಬರುವುದಿಲ್ಲ. ಇಂದ್ರನೊಡನೆ ಹೇಳಿಬಿಡು" ಮಾತು ಕೇಳಿದ ದೇವದೂತ ಚಕಿತನಾದ. "ಹಾಗಾದರೆ ನೀವು ಬ್ರಹ್ಮ ಲೋಕಕ್ಕಾಗಲೀ ಇತರ ಪುಣ್ಯ ಲೋಕಗಳಿಗಾಗಲೀ ಬನ್ನಿ" ಎಂದು ಹೇಳಿದ,

ಮಹರ್ಷಿ ಮುದ್ಗಲ ಉತ್ತರವಿತ್ತುದಿಷ್ಟೆ – "ಸ್ವರ್ಗದಲ್ಲಿರುವ ದೋಷಗಳು ಇತರ ಲೋಕದಲ್ಲಿಯೂ ಇರಲೇ ಬೇಕು."

"ಹೌದು, ಪರಮಾತ್ಮನ ಹೊರತು ದೋಷರಹಿತವಾದುದು ಎಲ್ಲೂ ಏನೂ ಇಲ್ಲ" ದೇವದೂತ ಉತ್ತರಿಸಿದ.

"ಹಾಗಾದರೆ ನಾನೆಲ್ಲಿಗೂ ಬರುವುದಿಲ್ಲ." ಮುದ್ಗಲ ಉತ್ತರಿಸಿದ. ದೇವದೂತ ನಿರಾಶನಾಗಿ ಬಂದ ದಾರಿಗೆ ಸುಂಕವಿಲ್ಲವೆಂದು ಖಾಲಿ ವಿಮಾನದೊಂದಿಗೆ ಹಿಂತಿರುಗಿದ. ದೇವರು ಋಷಿಯ ಈ ಭಾವನೆಯಿಂದ ಪ್ರೀತರಾದರು. ದೇವರೇ ಬಂದು ಋಷಿಯನ್ನು ತನ್ನ 'ಪರಮಧಾಮ'ಕ್ಕೆ ಕರೆದುಕೊಂಡು ಹೋದರಂತೆ.

ಸ್ವರ್ಗವಿದೆಯೇ? ದೇವರು ನೇರಾಗಿ ಬರುವರೇ ಎಂದು ನಾವು ತಿಳಿದಿಲ್ಲ. ಆದರ ಸುಖ-ದುಃಖ, ಪಾಪ ಪುಣ್ಯ ಎಲ್ಲವೂ ಈ ಧರಿತ್ರಿಯಲ್ಲೇ ಇದೆಯೆಂದು ನಾವು ಈ ಕತೆಯಿಂದ ತಿಳಿಯಬಹುದು.

(ವಿವಿಧ ಮೂಲಗಳಿಂದ)

# ಶ್ರೀ ಕೋದಂಡ ರಾಮಸ್ವಾಮಿ ಸುಪ್ರಭಾತ

( ಹಿಂದಿನ ಸಂಚಿಕೆ ತರುವಾಯ )

ಸಂಸ್ಕೃತ ಮೂಲ: ತೆಲುಗು ವ್ಯಾಖ್ಯಾನ,

ಡಾ॥ ಎಸ್. ಬಿ. ರಘುನಾಥಾಚಾರ್ಯ

## ಪ್ರಪತ್ತಿ

ಶ್ರೀ ಮೈಥಿಲೀ ನವಕರಾಬ್ಜ ನಿಷೇವ್ಯ ಮಾನೌ
ಸೌಮಿತ್ರಿ ಮಾನಸ ಮನೋಹರ ರಾಜಹಂಸೌ ॥
ಶ್ರೀವಾಯುಪುತ್ರ ಹೃದಯಾಬ್ಜ ಲಸದ್ವಿರೇಫೌ
ಕೋದಂಡರಾಮ ಚರಣೌ ಶರಣಂ ಪ್ರಪದ್ಯೇ ॥

ಶ್ರೀ ಮೈಥಿಲೀದೇವಿಯ ನವಕರಾರವಿಂದಗಳಿಂದ ಸೇವಿಸಲ್ಪಡುವ, ಲಕ್ಷ್ಮಣನ ಮನವೆಂಬ ಮಾನಸರೋವರದಲ್ಲಿ ವಿಹರಿಸುವ ರಾಜಹಂಸದಂತಹ, ಶ್ರೀ ಹನುಮಂತನ ಹೃದಯ ಕಮಲದಲ್ಲಿ ವಾಸಿಸುವ ದುಂಬಿಯಾದಂತಹ ಶ್ರೀ ಕೋದಂಡ ರಾಮಸ್ವಾಮಿಯ ಪಾದಪದ್ಮಗಳಿಗೆ ಶರಣಾಗುತ್ತಿದ್ದೇನೆ.

ಭವಬಂಧನದಿಂದ ಮುಕ್ತಿಯುಂಟಾಗಿ ಭಗವಂತನನ್ನು ಸೇರಬೇಕಾದಲ್ಲಿ ಭಕ್ತಿಯೇ ಪರಮೋಪಾಯವೆಂಬುದು ವೇದಾಂತ ದರ್ಶನದ ಸಿದ್ಧಾಂತ. ಕರ್ಮಯೋಗ ಜ್ಞಾನಯೋಗಗಳು ನಮ್ಮಲ್ಲಿ ಭಕ್ತಿಯನ್ನುಂಟುಮಾಡಲು ಪೂರಕವಾಗುತ್ತವೆ. ಭಕ್ತಿ ಪ್ರಪತ್ತಿಯ ಅಂಗ. ಪ್ರಪತ್ತಿಗೇ ನ್ಯಾಸ ವಿದ್ಯೆ ಶರಣಾಗತಿ ಎಂದೂ ಹೆಸರು. ಭಗವಂತನ ಪರವಾಗಿ ಚಿಂತಿಸುವುದು, ವಿರುದ್ಧ ಭಾವವನ್ನು ತೊರೆಯುವುದು, ತಪ್ಪದೆ ರಕ್ಷಿಸುವನೆಂಬ ನಂಬಿಕೆ, ಆತನನ್ನೇ ರಕ್ಷಕನನ್ನಾಗಿ ಅಂಗೀಕರಿಸುವುದು, ತನ್ನನ್ನು ಸರ್ವವಿಧದಲ್ಲೂ ಆತನಿಗೆ ಅರ್ಪಿಸಿಕೊಳ್ಳುವಿಕೆ – ಇವು ಐದೂ ಪ್ರಪತ್ತಿಯ ಅಂಗಗಳು. (ಅನುಕೂಲಸ್ಯ ಸಂಕಲ್ಪಃ ಪ್ರತಿಕೂಲಸ್ಯ ವರ್ಜನಂ, ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವ ವರಣಂ ತಥಾ, ಆತ್ಮ ನಿಕ್ಷೇಪ ಕಾರ್ಪಣ್ಯಂ.........) ಇಲ್ಲಿ ಶರಣಾಗತಿ ಕ್ರಿಯಾರೂಪ ತಾಳಿದೆ. ಸ್ವಾಮಿಪಾದಗಳು ಮೈಥಿಲಿಯ ಕರಾರವಿಂದಗಳಿಂದ ಸೇವಿಸಲ್ಪಡುತ್ತಿವೆ. ಶೇಷಾಂಶ ಸಂಭೂತನಾದ ಲಕ್ಷ್ಮಣನ ಮನವೆಂಬ ಸರೋವರದಲ್ಲಿ ವಿಹರಿಸುವ ರಾಜಹಂಸಗಳವು. ವಾಯುಪುತ್ರನ ಹೃದಯಾರವಿಂದದಲ್ಲಿನ ಭಕ್ತಿ ಮಧುವನ್ನು ಆಸ್ವಾದಿಸುವ ಮಧುಪಗಳಿವು. ನಿಜವಾದ ಭಕ್ತನು ಅವುಗಳನ್ನು ಸೇವಿಸುವುದಕ್ಕಿಂತ, ಶರಣಾಗತನಾಗುವುದಕ್ಕಿಂತ ಮಾಡತಕ್ಕದ್ದು, ಮಾಡಲಾಗುವುದು ಬೇರೇನಿದೆ ? ಇಲ್ಲಿ ಶರಣಾಗತ ಧರ್ಮದಲ್ಲಿ ಮುಖ್ಯರಾದ ಲಕ್ಷ್ಮಣ ವಾಯುಪುತ್ರರನ್ನು ಸ್ಮರಿಸುವುದು ವಿಶೇಷ.

ಶ್ರೀ ಗೌತಮ ಪ್ರಣಯಿನೀ ಕಠಿನೋಗ್ರಶಾಪ
ನಿರ್ವಾಪಣೌ ಶ್ರಿತಜನಾವನಬದ್ಧ ದೀಕ್ಷೌ
ಸುಗ್ರೀವ ದಾಶಪತಿ ಮುಖ್ಯಸಮಾಶ್ರಿತೌ ತೇ
ಕೋದಂಡರಾಮ! ಚರಣೌ ಶರಣಂ ಪ್ರಪದ್ಯೇ ॥

ಗೌತಮ ಮಹರ್ಷಿಸತಿಯಾದ ಅಹಲ್ಯೆಯ ಕಠಿಣ ಶಾಪವನ್ನು ನಾಶಮಾಡಿ ಆಶ್ರಿತರಕ್ಷಣೆಯ ವ್ರತವನ್ನು ಕೈಗೊಂಡು, ಸುಗ್ರೀವ ಗುಹರಿಂದ ಆಶ್ರಯಿಸಲ್ಪಟ್ಟ; ಓ! ಕೋದಂಡ ರಾಮಾ! ನಿನ್ನ ಚರಣಾರವಿಂದಗಳಲ್ಲಿ ಶರಣಾಗಿದ್ದೇನೆ.

ಗೌತಮನು ಅಹಲ್ಯೆಯನ್ನು ಕಲ್ಲಾಗಿ ಬದುಕೆಂದು ಶಾಪ ನೀಡಿದನು. ರಾಮಪಾದರಜ ಸೋಕಿದ ಕೂಡಲೇ ಶಿಲಾಖಂಡವಾಗಿದ್ದ ಅಹಲ್ಯೆ ಕಳಾಖಂಡವಾಗಿ ರೂಪ ಹೊಂದಿದಳು. ಕಪಿರಾಜ ಸುಗ್ರೀವನು ಶ್ರೀರಾಮನನ್ನು ಆಶ್ರಯಿಸಿ ಶರಣಾಗತನಾಗಿ ರಕ್ಷಣೆಹೊಂದಿದನು. ಗುಹನು ಪರಮಾತ್ಮನ ಪವಿತ್ರ ಪದಕಮಲಗಳನ್ನು ತೊಳೆದು ಧನ್ಯನಾದನು. ಅಂತಹವು ಸ್ವಾಮಿಪಾದಗಳು. ಅಷ್ಟೇ ಅಲ್ಲ, ತನ್ನನ್ನು ಆಶ್ರಯಿಸಿದವರನ್ನು ಎಂದಿಗೂ ಬಿಡದೆ ರಕ್ಷಿಸುವ ದೀಕ್ಷೆ ಹೊಂದಿದವು ಅವು. ಅಂತಹ ಪಾದಾರವಿಂದಗಳಲ್ಲಿ ಶರಣಾಗುವುದು ಎಂತಹ ಭಾಗ್ಯವಿಶೇಷ. ಇಲ್ಲಿ ಅಹಲ್ಯೆ, ಸುಗ್ರೀವ, ಗುಹರು ಪ್ರಪನ್ನರಿಗೆ ಪ್ರಥಮೋದಾಹರಣೆಗಳು. ಭಂಗ್ಯಂತರವಾಗಿ ದಾಶರಥಿಯ ಪ್ರಭಾವವನ್ನು ವರ್ಣಿಸುವುದು ಕವಿಯಸಂಕಲ್ಪ.

## ಮಂಗಳಾಶಾಸನಂ

ಜಾನಕೀ ಹೃದಯಾಂಭೋಜ ಚಂಚರೀಕಾಯ
ಶಾರ್ಙ್ಗಿಣೇ
ಶ್ರೀಮತೇ ರಘುನಾಥಾಯ ಮಂಗಳಂ
ಮಂಗಳಾತ್ಮನೇ ॥

ಜಾನಕೀ ಹೃದಯಾರವಿಂದ ಮಧುಪನೂ, ಶಾರ್ಙ್ಗಧರನೂ, ಮಂಗಳಸ್ವರೂಪನೂ ಆದ ಶ್ರೀರಾಮಚಂದ್ರನಿಗೆ ಮಂಗಳವಾಗಲಿ.

ಸ್ವಾಮಿಗೆ ಮಂಗಳವನ್ನು ಹಾರೈಸುವ ಅರ್ಹತೆ ನಮಗಿಲ್ಲದಿದ್ದರೂ ! ಆದರೂ ಮುಗ್ಧಮೋಹನರೂಪನಾದ ಅವನನ್ನು ದರ್ಶಿಸಿ, ಸೇವಿಸಿ, ಇಂತಹಸ್ವಾಮಿಗೆ ಯಾವಾಗ್ಲೂ ಮಂಗಳವಾಗಬೇಕೆಂದು ಆರ್ದ್ರ ಹೃದಯದಿಂದ ಭಕ್ತಿ ಪರವಶತೆಯಿಂದ ಭಕ್ತನು ಹಾರೈಸುವುದು ಪರಿಪಾಟಿ. ಶ್ರೀರಾಮ ಚಂದ್ರನು ಏಕಪತ್ನೀವ್ರತ, ಜಾನಕಿಯಬಗ್ಗೆ ನಿರವಧಿಕ ಪ್ರೇಮ ಹೊಂದಿದವನು. ಶಾರ್ಙ್ಗವೆನ್ನುವ ಧನುವನ್ನು ಹೊಂದಿದವನು. ನಿತ್ಯಮಂಗಳಸ್ವರೂಪಿ. ಆತನಿಗೆ ಸದಾ

ಮಂಗಳವಾಗಬೇಕೆಂದು– ಆತನು ನಮ್ಮನ್ನು ರಕ್ಷಿಸಬೇಕೆಂದು ಈ ಮಂಗಳಾಶಾಸನ.

ಮೈಥಿಲೀ ಕಜ್ಜಲಾಂಕ ಶ್ರೀವಿಲಸದ್ಗಂಡಶಾಲಿನೇ
ಕೋದಂಡರಾಮ ನಾಮ್ನೇ ತೇ ಕೌಸಲೇಯಾಯ ಮಂಗಳಂ.

ಮೈಥಿಲಿಯ ಕಾಡಿಗೆಯ ಮುದ್ರೆಗಳಿಂದ ಹೊಳೆಯುವ ಗದ್ದದ್ದಿಂದ ಕೂಡಿದ ಕೌಸಲ್ಯಾನಂದ ವರ್ಧನನಾದ ಕೋದಂಡರಾಮ ನಾಮಧೇಯನಾದ ಓ ಸ್ವಾಮೀ! ನಿನಗೆ ನಿತ್ಯ ಮಂಗಳ ವಾಗಲಿ.

ಕೌಸಲ್ಯೆಯ ಮುದ್ದುಗುವರ ಕೋದಂಡರಾಮ. ಆತ ರಸಿಕಹೃದಯಾಭಿರಾಮ. ಈಗಲೇ ನಿದ್ರೆಯಿಂದೇಳುತ್ತಿದ್ದಾನೆ. ಅದೋ ಆತನ ಗದ್ದದ ಮೇಲೆ ಯಾವುದೊ ಕಪ್ಪು ಮಚ್ಚೆ. ಅದು ಮೈಥಿಲಿಯ ಕಾಡಿಗೆಯ ಮುದ್ರೆಯಲ್ಲ ತಾನೆ! ಮತ್ತೇನು! ಅದು ಸರಸಹೃದಯಿ ಆದ ಸ್ವಾಮಿಯ ವಿಲಾಸ ಮುದ್ರೆಯೇ. ಅಂತಹ ನಮ್ಮ ಕೋದಂಡರಾಮಸ್ವಾಮಿಗೆ ನಿರಂತರ ಮಂಗಳವಾಗಲಿ.

ರಘುನಾಥ ಪದಾಂಬೋಜ ಸೇವಾಪ್ರವಣ ಚೇತಸಾ
ಅಕಾರಿ ರಘುನಾಥೇನ ಸ್ತವಸ್ತತ್ಸುಪ್ರಭಾತಿಕಾ.

ರಘುನಾಥ ಪದ ಪದ್ಮ ತತ್ಪರವಾದ ಮನಹೊಂದಿದ ರಘುನಾಥನಿಂದ ಆತನ ಸುಪ್ರಭಾವು ರಚಿಸಲ್ಪಟ್ಟಿತು.

ಆ ರಘುನಾಥನ ಪಾದಪದ್ಮಗಳಿಗೆ ಮನವೆಂದೋ ಅಂಕಿತವಾಗಿದೆ. ಆತನನ್ನು ಎಷ್ಟುವಿಧಗಳಲ್ಲಿ ಸೇವಿಸಬಹುದೋ ಅಷ್ಟೊ ವಿಧದಲ್ಲಿ ಸೇವಿಸಲು ಮನ ಕಾತರವಾಗಿದೆ. ಅವುಗಳಲ್ಲಿ ಈ ಸುಪ್ರಭಾತ ಸಹ ಒಂದು ಭಾಗವೇ. ಇದನ್ನು ಸೇವಾಭಾವದಿಂದ ರಘುನಾಥನು ಬರೆದಿದ್ದಾನೆ.

---

# ವಿಶ್ವಾಮಿತ್ರ

**ಶ್ರೀ ಯಂ. ವಿ. ಸಂಪತ್ಕುಮಾರಾಚಾರ್ಯ**

ವಿಶ್ವಾಮಿತ್ರಂ ಮಹಾತ್ಮಾನಂ
ಶರಣಾಗತವತ್ಸಲಂ।
ವೇದವೇದಾನ್ತಸಾರಜ್ಞಂ ವಂದೇ
ಬ್ರಹ್ಮರ್ಷಿಪುಂಗವಂ ॥

ವಿಶ್ವಾಮಿತ್ರನೆಂಬ ಹೆಸರಿನಲ್ಲೇ ಅನಿರ್ವಚನೀಯವಾದ ಆಕರ್ಷಣಶಕ್ತಿ ಇದೆ. "ವಿಶ್ವಸ್ಯಮಿತ್ರಂ, ವಿಶ್ವಾಮಿತ್ರಃ"–ಪ್ರಪಂಚಕ್ಕೆಲ್ಲಾ ಮಿತ್ರನಾದವನೇ "ವಿಶ್ವಾಮಿತ್ರ". ಲೋಕಕಲ್ಯಾಣವನ್ನು ಶಾಶ್ವತವಾಗಿ ಸ್ಥಾಪಿಸಿದ ಮಹಾನುಭಾವ ವಿಶ್ವಾಮಿತ್ರ. ಇವನು ಸಾಧಿಸಿದ ಅಮೋಘವಾದ ಮತ್ತು ಅಸಾಧ್ಯವಾದ ಸಿದ್ಧಿಗಳು ಅಸಂಖ್ಯವಾಗಿವೆ. ಆ ವಿಚಾರವಾಗಿಯೇ ಒಂದು ಗ್ರಂಥವನ್ನು ಬರೆಯಬಹುದು. ಅವನ ತಪಃಸಿದ್ಧಿ ಅನ್ಯಾದೃಶವಾದುದು. ಪರಪೀಡೆಯನ್ನು ನೋಡಿ ಸಹಿಸಲಾರದೆ, ಅವರ ಕಷ್ಟನಿವಾರಣೆಗಾಗಿ ತನ್ನ ತಪಃಸಿದ್ಧಿಯನ್ನೆಲ್ಲಾ ಧಾರೆಯೆರೆದು ಅವರ ಕಷ್ಟಗಳನ್ನು ಪರಿಹರಿಸಿದ ಸಂದರ್ಭಗಳು ಅನೇಕವಾಗಿ ದೊರೆಯುತ್ತವೆ. ಆ ಮಹಾಮಹಿಮನ ಸೂಕ್ಷ್ಮಪರಿಚಯ ಮಾಡಿಸುವುದೇ ಈ ಲೇಖನದ ಉದ್ದೇಶ.

ಅವನ ಜನನಕ್ರಮವು ಈ ರೀತಿ ಇದೆ 1. ಪ್ರಜಾಪತಿ. 2. ಕುಶ. 3. ಕುಶನಾಭ. 4. ಗಾಧಿ. 5. ವಿಶ್ವಾಮಿತ್ರ. (ಕೃಶಾಶ್ವಮುನಿ ಶಿಷ್ಯ)ಇವನಿಗೆ ಕೌಶಿಕ, ವಿಶ್ವಾಮಿತ್ರ, ಗಾಧಿಸೂನು, ಇತ್ಯಾದಿ ಅನೇಕ ನಾಮಧೇಯಗಳು ಪ್ರಸಿದ್ಧವಾಗಿವೆ.

ಬ್ರಹ್ಮವಂಶಸಂಜಾತನೂ, ಗಾಧಿಪುತ್ರನೂ ಆದ ವಿಶ್ವಾಮಿತ್ರನು ತಂದೆಯಿಂದ ಪಡೆದ ರಾಜ್ಯವನ್ನು ತನ್ನ ಶಕ್ತಿ ಸಾಮರ್ಥ್ಯದಿಂದಲೂ ನ್ಯಾಯತತ್ಪರತೆಯಿಂದಲೂ ವಿಸ್ತರಿಸಿಕೊಂಡು ಪ್ರಜೆಗಳನ್ನು ತನ್ನ ಮಕ್ಕಳಂತೆ ಬಹಳ ವಿಶ್ವಾಸದಿಂದ ಪಾಲಿಸಿಕೊಂಡು ಬರುತ್ತಿದ್ದನು. ಹೀಗಿರಲು, ಒಂದುಸಲ ವಿಶ್ವಾಮಿತ್ರನು ಸೈನ್ಯಸಮೇತನಾಗಿ ಸಂಚರಿಸುತ್ತಿರುವಾಗ ವಸಿಷ್ಠರ ಆಶ್ರಮಕ್ಕೆ ಬಂದನು. ವಸಿಷ್ಠರು ಅವನನ್ನು ಬಹಳ ಗೌರವದಿಂದ ಸ್ವಾಗತಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದರು. ವಿಶ್ವಾಮಿತ್ರನು ಹೊರಡಲು ಅಪ್ಪಣೆ ಬೇಡಿದಾಗ, ವಸಿಷ್ಠರು ತಮ್ಮ ಆತಿಥ್ಯವನ್ನು ಸ್ವೀಕರಿಸಿಯೇ ಹೊರಡಬೇಕೆಂದು ಬಲಾತ್ಕರಿಸಲು ಅಲ್ಲಿಯೇ ನಿಂತನು.

ವಸಿಷ್ಠರು ತಪಃಪ್ರಭಾವದಿಂದ ವಿಶೇಷಸಿದ್ಧಿಯನ್ನು ಪಡೆದು, ಮಹತ್ಕಾರ್ಯಗಳನ್ನು ಸುಲಭವಾಗಿ ಮಾಡಬಲ್ಲ ತಪೋನಿಧಿ. ಇವರ ತಪಸ್ಸಿನಿಂದ ತೃಪ್ತರಾದ ದೇವತೆಗಳು ಕಾಮಧೇನುವಿನ ಸಂತಾನವಾದ ನಂದಿನಿ ಎಂಬ ದೇವಧೇನುವನ್ನು ಇವರಿಗೆ ಹೋಮಧೇನುವನ್ನಾಗಿ ಕೊಟ್ಟರು. ಆ ಧೇನುವೂ ಕಾಮಧೇನುವಿನಂತೆಯೇ ಸರ್ವಾರ್ಥವನ್ನು ಒದಗಿಸುವ ಪ್ರಭಾವವನ್ನು ಪಡೆದಿತ್ತು. ಅದರ ಪ್ರಭಾವದಿಂದ ವಸಿಷ್ಠರು ವಿಶ್ವಾಮಿತ್ರನಿಗೂ ಅವನ ಅಮಿತ ಸೈನ್ಯಕ್ಕೂ ಭಕ್ಷ್ಯಭೋಜ್ಯ ಸಮೇತವಾದ ಅಸಾಧಾರಣ ಔತಣವನ್ನು ಮಾಡಿಸಿ ಸರ್ವರನ್ನು ತೃಪ್ತಿಪಡಿಸಿದರು.

ಸಾಮಾನ್ಯವಾದ ಕುಟೀರವಾಸಿಯಾದ ಮಹರ್ಷಿಯು ಇಷ್ಟು ವೈಭವದಿಂದ ಸತ್ಕರಿಸಿದ್ದನ್ನು ನೋಡಿ ವಿಶ್ವಾಮಿತ್ರನಿಗೆ ಆಶ್ಚರ್ಯವೂ ಸ್ವಲ್ಪ ಅಸೂಯೆಯೂ ಉಂಟಾಯಿತು. ಇದರ ರಹಸ್ಯವೇನಿರಬಹುದೆಂದು ಊಹಿಸಿದಮೇಲೆ ನಂದಿನಿಯ ಪ್ರಭಾವವೆಂದು ತಿಳಿಯಿತು. ಆಗ ಇಂತಹ ಉತ್ತಮವಾದ ವಸ್ತುವು ನ್ಯಾಯವಾಗಿ "ರತ್ನಹಾರೀಚ ಪಾರ್ಥಿವಃ" ಎಂಬ ಉಕ್ತಿಯಂತೆ ರಾಜನಸ್ವತ್ತು, ಎಂದು ಭಾವಿಸಿ ಹೇಗಾದರೂ ಅದನ್ನು ತನ್ನ ವಶಪಡಿಸಿಕೊಳ್ಳಬೇಕೆಂದು ಯೋಚಿಸಿದನು. ಅಸಂಖ್ಯಾತ ಉತ್ತಮೋತ್ತಮ ಧೇನುಗಳನ್ನು ಕೊಡುವುದಾಗಿಯೂ, ಈ ಒಂದು ಧೇನುವನ್ನು ತನಗೆ ಕೊಡಬೇಕೆಂದೂ ಪ್ರಾರ್ಥಿಸಿದನು. ವಶಿಷ್ಠರು ಒಪ್ಪದೇ ಇದ್ದುದರಿಂದ, ಕೊನೆಗೆ ತನ್ನ ಬಲವನ್ನು ಪ್ರದರ್ಶಿಸಿ, ನಂದಿನಿಯನ್ನು ಕರೆದೊಯ್ಯಲು ಸಿದ್ಧನಾದನು. ಎಷ್ಟೇ ಪ್ರಯತ್ನಪಟ್ಟರೂ ಆ ಧೇನುವು ಇವನೊಡನೆ ಹೊರಡಲು ಸಿದ್ಧವಾಗಲಿಲ್ಲ. ಅಲ್ಲದೆ ಅದು ವಸಿಷ್ಠಮಹರ್ಷಿಯನ್ನು ಕುರಿತು, "ನಿಮ್ಮಲ್ಲಿ ನಾನು ಯಾವ ವಿಧವಾದ ಅಪರಾಧವನ್ನು ಮಾಡದಿದ್ದರೂ ನನ್ನನ್ನು ಏಕೆ ಆಶ್ರಮದಿಂದ ದೂರಮಾಡಲು ಪ್ರಯತ್ನಿಸುತ್ತಿರುವಿರಿ" ಎಂದು ಪ್ರಶ್ನಿಸಲು, ವಸಿಷ್ಠರು, "ವಿಶ್ವಾಮಿತ್ರನನ್ನು ತಪೋಬಲದಿಂದ ನಿಗ್ರಹಿಸಬಲ್ಲೆನಾದರೂ, ಆತನು ರಾಜನಾದುದರಿಂದ ಸುಮ್ಮನಿದ್ದೇನೆ" ಎಂದು ತಿಳಿಸಲು, ನಂದಿನಿಯು "ನೀವು ಅಪ್ಪಣೆ ಕೊಟ್ಟರೆ ನನ್ನನ್ನು ನಾನೆ ಸಂರಕ್ಷಿಸಿಕೊಳ್ಳುತ್ತೇನೆ"ಎಂದು ಹೇಳಿ ತನ್ನ ಶರೀರವನ್ನು ಬಲವಾಗಿ ಒದರಲು, ಅದರಿಂದ ಅನೇಕರು ಹುಟ್ಟಿ ಬಂದು ವಿಶ್ವಾಮಿತ್ರನ ಸೈನ್ಯವನ್ನು ನಾಶಪಡಿಸಿದರು.

ವಿಶ್ವಾಮಿತ್ರನಿಗೆ ಕೋಪವು ಮಿತಿಮೀರಿತು, ರಾಜ್ಯವನ್ನು ತನ್ನ ಮಗನಿಗೆ ಒಪ್ಪಿಸಿ, ಮಹೇಶ್ವರನನ್ನು ತಪಸ್ಸಿನಿಂದ ಒಲಿಸಿ, ಅನೇಕ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ವಸಿಷ್ಠಾಶ್ರಮಕ್ಕೆ ಬಂದು ಅವರನ್ನು ಯುದ್ಧಕ್ಕೆ ಆಹ್ವಾನಿಸಿದನು. ವಸಿಷ್ಠರಿಗೂ ಕೋಪಬಂತು. ಅವರು ವಿಧಿಯಿಲ್ಲದೆ ಯುದ್ಧಕ್ಕೆ ಸಿದ್ಧರಾಗಿ, ತಮ್ಮ ಬ್ರಹ್ಮದಂಡವನ್ನು ತಂದು ಯುದ್ಧಕ್ಕೆ ನಿಂತರು. ವಿಶ್ವಾಮಿತ್ರನು ಪ್ರಯೋಗಿಸಿದ ಉತ್ತಮಾಸ್ತ್ರವೆಲ್ಲವನ್ನೂ ಬ್ರಹದಂಡವೇ ನುಂಗಿತು, ಕೊನೆಗೆ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದರೂ ಅದೂ ಸಹ ಫಲಕಾರಿಯಾಗದೇ ವಸಿಷ್ಠರ ತಪಃಶಕ್ತಿಗೆ ಆಹುತಿ ಆಯಿತು.

ವಿಶ್ವಾಮಿತ್ರನಿಗೆ ಕೋಪವೂ ನಾಚಿಕೆಯೂ ಏಕಕಾಲದಲ್ಲೇ ಉಂಟಾಯಿತು ಏನುಮಾಡಲೂ ತೋಚದೆ, "ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಂ ಏಕೇನಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿಮೇ" ಎಂದು ಹೇಳುತ್ತಾ ಸರ್ವಸ್ವವೂ ಸಿದ್ಧಿಸುವ ತಪೋಬಲದಮುಂದೆ ಸೈನ್ಯಬಲವು ವ್ಯರ್ಥವೆಂದು ನಿರ್ಧರಿಸಿ, ತಪಸ್ಸನ್ನು ಮಾಡಲು ಹೊರಟು ಹೋದನು.

ಹೀಗೆ ರಾಜ್ಯಕೋಶಾದಿ ಸಕಲವೈಭವವನ್ನು ತೃಣೀಕರಿಸಿ ತಪಸ್ಸಿನಲ್ಲೇ ನಿರತನಾಗಿ ಅನ್ಯಾದೃಶವಾದ ತಪಃಸಿದ್ಧಿಯನ್ನು ಪಡೆದು, ಬ್ರಹ್ಮನನ್ನು ಮೆಚ್ಚಿಸಿ ರಾಜರ್ಷಿ ಎನಿಸಿಕೊಂಡನು. ತಪಸ್ಸನ್ನು ಆಚರಿಸುವಾಗ ಅವನಿಗೆ ವಿಘ್ನಪರಂಪರೆಗಳೇ ಒದಗಿಬಂದವು. ಆದರೂ ಅವನ್ನೆಲ್ಲಾ ಜಯಿಸಿ ಉಗ್ರತಪಸ್ಸಿನಿಂದ ತಪಸ್ವಿಗಳಲ್ಲಿ ಅಗ್ರಪಂಕ್ತಿಗೆ ಸೇರಿದನು. ಅವನು ಸಿದ್ಧಿಪಡೆಯಲು ಎಷ್ಟು ವರ್ಷಗಳಕಾಲ ತಪಸ್ಸನ್ನು ಆಚರಿಸಿದನೋ; ಹೇಳುವುದು ಕಷ್ಟ. ಇಷ್ಟಾದರೂ ತಾನು ಬ್ರಹ್ಮರ್ಷಿಯಾಗಲಿಲ್ಲವೆಂಬ ಕೊರತೆಯು ಆತನಿಗೆ ಇದ್ದೇ ಇತ್ತು. ಆದ್ದರಿಂದ ಪುನಃ ತಪೋನಿರತನಾದನು. ಈ ಸಂದರ್ಭದಲ್ಲಿ ತ್ರಿಶಂಕು ಮಹಾರಾಜನು ಸಶರೀರನಾಗಿ ಸ್ವರ್ಗಕ್ಕೆ ತೆರಳಬೇಕೆಂದು ಬಯಸಿ, ತನ್ನ ಕುಲಗುರುವಾದ ವಸಿಷ್ಠರಲ್ಲಿ ತನ್ನ ಅಪೇಕ್ಷೆಯನ್ನು ನಿವೇದಿಸಿಕೊಂಡನು. ಅದು ಸಾಧ್ಯವಿಲ್ಲವೆಂದು ಅವರು ತಿಳಿಸಲು ಗುರುಪುತ್ರರನ್ನು ಪ್ರಾರ್ಥಿಸಿದನು. ಅವರೂ ನಿರಾಕರಿಸಿದ್ದಲ್ಲದೆ, ಚಂಡಾಲನಾಗುವಂತೆ ಶಪಿಸಿದರು. ತ್ರಿಶಂಕುವು ಬಹಳ ಖಿನ್ನನಾಗಿ ಹೇಗಾದರೂ ತನ್ನ ಮನೋರಥವನ್ನು ಈಡೇರಿಸಿಕೊಳ್ಳಬೇಕು

ಎಂದು ಸಂಕಲ್ಪಿಸಿ, ವಸಿಷ್ಠರ ವೈರಿಯಾದ ವಿಶ್ವಾಮಿತ್ರನಿಂದ ತನ್ನ ಕೆಲಸವು ಸಫಲವಾಗಬಹುದೆಂದು ಯೋಚಿಸಿ ಅವರಲ್ಲಿಗೆ ಹೋಗಿ ವಿವರವನ್ನೆಲ್ಲಾ ತಿಳಿಸಿದನು. ವಿಶ್ವಾಮಿತ್ರನು ಅವನಿಗೆ ಅಭಯವಚನವನ್ನಿತ್ತು, ಅವನಿಂದ ಯಾಗಮಾಡಿಸಲು ನಿರ್ಧರಿಸಿದನು, ಮತ್ತು ಬೇರೆ ಋಷಿಗಳನ್ನು ಆಹ್ವಾನಿಸಲು ತನ್ನ ಶಿಷ್ಯರನ್ನು ಕಳಿಸಿದನು. ಅನೇಕ ಮುನಿವರ್ಯರು ಇವನಿಗೆ ಹೆದರಿಬಂದರು. ವಸಿಷ್ಠಪುತ್ರರು ಇದನ್ನು ನೋಡಿ, "ಯಜ್ಞದೀಕ್ಷಿತನು ಚಂಡಾಲ, ಪುರೋಹಿತನು, ಕ್ಷತ್ರಿಯ, ಉಳಿದ ಋತ್ವಿಜರು ಎಂತಹವರೋ"– ಎಂದು ಹಾಸ್ಯಮಾಡಿದರು. ಈ ಅಂಶವನ್ನು ಅರಿತುಕೊಂಡ ವಿಶ್ವಾಮಿತ್ರನು ತನ್ನ ತಪಃಶಕ್ತಿಯಿಂದ ಆ ವಸಿಷ್ಠಪುತ್ರರನ್ನು ನಿಗ್ರಹಿಸಿ, ಯಜ್ಞವನ್ನು ಪ್ರಾರಂಭಿಸಿಯೇ ಬಿಟ್ಟನು.

ಯಜ್ಞಕಾಲದಲ್ಲಿ ಎಷ್ಟುವಿಧವಾಗಿ ಆಹ್ವಾನಿಸಿದರೂ ಇಂದ್ರಾದಿದೇವತೆಗಳು ಬರಲಿಲ್ಲ. ಇದರಿಂದ ವಿಪರೀತ ಕೋಪಾವಿಷ್ಟನಾಗಿ ವಿಶ್ವಾಮಿತ್ರನು "ಅವರು ಬರದೇಇದ್ದರೆ ಲೋಕವೇನೂ ಮುಳುಗಿ ಹೋಗುವುದಿಲ್ಲ. ನನ್ನ ತಪಃಶಕ್ತಿಯನ್ನೆಲ್ಲಾ ನಿನಗೆ ಧಾರೆ ಎರೆಯುತ್ತೇನೆ. ನೀನು ಸ್ವರ್ಗಕ್ಕೆ ಹೊರಡು" ಎಂದು ಆಜ್ಞಾಪಿಸಿದನು. ಆದರಂತೆಯೇ ಅವನು ಹೊರಟು ಸ್ವರ್ಗವನ್ನು ಸಮೀಪಿಸಲು ಸ್ವರ್ಗದ್ವಾರದಲ್ಲಿ ದೇವೇಂದ್ರನ ಸೇವಕರು ತ್ರಿಶಂಕುವನ್ನು ತಡೆದು "ಚಂಡಾಲನಿಗೆ ಸ್ವರ್ಗದಲ್ಲಿ ಪ್ರವೇಶವಿಲ್ಲ"ವೆಂದು ಧಿಕ್ಕರಿಸಿ, ಅಲ್ಲಿಂದ ಅವನನ್ನು ನೂಕಿಬಿಟ್ಟರು. ತಲೆಕೆಳಗಾಗಿ ಕೆಳಕ್ಕೆ ಬೀಳುತ್ತಿದ್ದ ತ್ರಿಶಂಕುವು ಆರ್ತನಾಗಿ ಕೂಗಿಕೊಂಡನು. ಆಗ ವಿಶ್ವಾಮಿತ್ರನು, "ಅನ್ಯಮಿಂದ್ರಂ ಕರಿಷ್ಯಾಮಿ ಲೋಕೋ ವಾಸ್ಯಾದನಿಂದ್ರಕಃ" (ನಾನು ಬೇರೆ ಇಂದ್ರನನ್ನೇ ಸೃಷ್ಟಿಮಾಡುವೆನು ಅಥವಾ ಈಗಿರುವ ಇಂದ್ರನನ್ನೇ ನಾಶಮಾಡಿ ಲೋಕದಲ್ಲಿ ಇಂದ್ರನೇ ಇಲ್ಲದಂತೆ ಮಾಡುವೆನು). ಎಂದು ಹೇಳಿ ಅಪರಬ್ರಹ್ಮನಂತೆ ಹೊಸಸೃಷ್ಟಿಯನ್ನೇ ಮಾಡಲುಪಕ್ರಮಿಸಿದನು. ಹೀಗೆ ಮತ್ತೊಂದು ಸ್ವರ್ಗವನ್ನೇ ಅವನು ನಿರ್ಮಿಸಿದನು. ಆಗ ಭಯಗೊಂಡ ದೇವತೆಗಳು ವಿಶ್ವಾಮಿತ್ರನ ಸಮೀಪಕ್ಕೆ ಬಂದು "ನೀನು ಧರ್ಮಜ್ಞನಾಗಿದ್ದರೂ, ಗುರುಶಾಪದಿಂದ ಭ್ರಷ್ಟನಾದವನನ್ನು ಸಶರೀರನಾಗಿ ಸ್ವರ್ಗಕ್ಕೆ ಕಳಿಸುವುದು ನ್ಯಾಯವೇ? ನೀನು ಕುಪಿತನಾದರೆ ಹೇಗೆ?" ಎಂದು ಮೊರೆ ಇಡಲು ಆರಂಭಿಸಿದರು. ಆಗ ಸಮಾಧಾನಗೊಂಡ ವಿಶ್ವಾಮಿತ್ರನು, "ನಾನು ತ್ರಿಶಂಕುವಿಗೆ ವಾಗ್ದಾನ ಮಾಡಿರುವುದರಿಂದ ವಚನಭ್ರಷ್ಟನಾಗಲಾರೆ. ನಾನು ಹೊಸದಾಗಿ ಸೃಷ್ಟಿಸಿರುವುದೆಲ್ಲಾ ಹಾಗೆಯೇ ಇರಲಿ. ಮತ್ತು "ತ್ರಿಶಂಕು ಸ್ವರ್ಗ"ವೆಂದು ಪ್ರತ್ಯೇಕವಾಗಿ ಈ ಲೋಕವೂ ಇರಲಿ. ಎಂದು ಹೇಳಿದನು. ದೇವತೆಗಳೆಲ್ಲರೂ ಇದಕ್ಕೆ ಒಪ್ಪಬೇಕಾಯಿತು. ಆಕಾಲದಿಂದ "ತ್ರಿಶಂಕುಸ್ವರ್ಗ"ವೆಂಬ ಮತ್ತೊಂದು ಲೋಕವು ದಕ್ಷಿಣದಿಕ್ಕಿನಲ್ಲಿ ಪ್ರಖ್ಯಾತಿಗೆ ಬಂದಿತು. ಈ ನೂತನಸೃಷ್ಟಿಯಿಂದ ವಿಶ್ವಾಮಿತ್ರನ ವಾಗ್ದಾನವು ಉಳಿದರೂ ಅವನ ತಪಃಫಲವೆಲ್ಲಾ ವ್ಯಯವಾಗಿ ಹೋಯಿತು. ಆದ್ದರಿಂದ ಆ ಸ್ಥಳವನ್ನೇ ಬಿಟ್ಟು ಪುನಃತಪಸ್ಸನ್ನು ಆಚರಿಸಲು "ಪುಷ್ಕರಕ್ಷೇತ್ರ"ಕ್ಕೆ ಹೊರಟನು. ಅಲ್ಲಿ ಸಾವಿರಾರು ವರ್ಷ ಘೋರವಾದ ತಪಸ್ಸನ್ನು ಆಚರಿಸಿದನು.

ಈ ಸಂದರ್ಭದಲ್ಲಿ ಅಯೋಧ್ಯಾಧಿಪತಿಯಾದ ಅಂಬರೀಷಮಹಾರಾಜನು ಯಜ್ಞಮಾಡುತ್ತಿದ್ದನು ಯಜ್ಞಪಶುವು ಹೇಗೋ ಅಪಹೃತವಾಯಿತು, ಋತ್ವಿಜರು ರಾಜನನ್ನು ಕುರಿತು, "ನಿನ್ನ ಅಜಾಗರೂಕತೆಯಿಂದ ಯಜ್ಞಪಶುವು ನಷ್ಟವಾಗಿರುವುದರಿಂದ. ಯಜ್ಞಪಶುವನ್ನು ಹುಡುಕಿಸಿ ತರಿಸು. ಅಥವಾ ಆ ಸ್ಥಾನದಲ್ಲಿ ಮನುಷ್ಯಪಶುವನ್ನು ಸಿದ್ಧಪಡಿಸು. ಹೀಗೆಮಾಡದಿದ್ದರೆ ನಿನಗೆ ಕೇಡು ತಪ್ಪುವುದಿಲ್ಲ". ಎಂದು ತಿಳಿಸಲು, ಯಜ್ಞಪಶುವನ್ನು ತರಲಾರದೆ, ರಾಜನು ಮನುಷ್ಯಪಶುವನ್ನು ತರಲು ಹೊರಟನು. ಬಹಳ ಹುಡುಕಿದಮೇಲೆ ಋಚೀಕನೆಂಬ ವಿಪ್ರೋತ್ತಮನನ್ನು ಕಂಡು ಅನೇಕ ಗೋವುಗಳನ್ನು ಅವನಿಗೆ ಕೊಟ್ಟು, ಅವನ ನಡುಕಲ ಮಗ ಶುನಶ್ಶೇಫನನ್ನು ಪಡೆದನು. ಮಾರ್ಗಮಧ್ಯದಲ್ಲಿ ಶುನಶ್ಶೇಫನು ತನ್ನ ಬಂಧುವಾದ ವಿಶ್ವಾಮಿತ್ರನನ್ನು ಸಂಧಿಸಿ ತನಗೆ ಒದಗಿರುವ ವಿಪತ್ತನ್ನು ವಿವರಿಸಲು, ಅವನನ್ನು ಉಳಿಸಲು ತನ್ನ ಮಕ್ಕಳಲ್ಲಿ ಯಾರಾದರೂ ಒಬ್ಬರು ಹೋಗಿ ಅವನ ದುರ್ಗತಿಯನ್ನು ನಿವಾರಿಸಬೇಕೆಂದು ತಿಳಿಸಿದನು. ಯಾರೂ ಇದಕ್ಕೆ ಒಪ್ಪದೇ ತಂದೆಯ ಶಾಪಕ್ಕೆ ಗುರಿಯಾದರು. ಆಗ ವಿಶ್ವಾಮಿತ್ರನು ಅವನಲ್ಲಿ ಕೃಪೆಯಿಟ್ಟು, ಮಂತ್ರದ್ವಯವನ್ನು ಅವನಿಗೆ ಉಪದೇಶಿಸಿದನು. ಯಜ್ಞಕಾಲದಲ್ಲಿ ಶುನಶ್ಶೇಫನು ವಿಶ್ವಾಮಿತ್ರನಿಂದ ಉಪದೇಶಿಸಲ್ಪಟ್ಟ ಮಂತ್ರಗಳ ಪುರಶ್ಚರಣೆಯಿಂದ ಪ್ರಜಾಪತಿ ಅಗ್ನಿ, ಸವಿತೃ, ವರುಣ, ವಿಶ್ವೇದೇವತೆಗಳು, ಇಂದ್ರ, ಉಷಸ್ಸು ಇವರನ್ನು ಸ್ತೋತ್ರಮಾಡಲು, ಅವರು ಸುಪ್ರಸನ್ನರಾಗಿ ಬಂದು ಇವನ ಕಟ್ಟುಗಳನ್ನೆಲ್ಲಾ ಬಿಡಿಸಿದರು. ಹೀಗೆ, ಅವನು ತನ್ನ ಕಷ್ಟದಿಂದ ಪಾರಾದನು. 'ಐತರೇಯಬ್ರಾಹ್ಮಣ'ದಲ್ಲಿ ವಿಶ್ವಾಮಿತ್ರನೇ ಶುನಶ್ಶೇಫನನ್ನು ತನ್ನ ಜ್ಯೇಷ್ಠಪುತ್ರನನ್ನಾಗಿ ಪರಿಗ್ರಹಿಸಿದನೆಂದು ತಿಳಿಸಲ್ಪಟ್ಟಿದೆ. ಆ ದಿವ್ಯಮಂತ್ರದ ಪ್ರಭಾವದಿಂದ ರಾಜನ ಯಜ್ಞವೂ ಸಫಲವಾಯಿತು, ಶುನಶ್ಶೇಫನೂ ಉಳಿದುಕೊಂಡನು. ಹೀಗೆ ತಪಸ್ಸಿಗೆ ಆಗಾಗ ಭಂಗ ಬರುತ್ತಿದ್ದರೂ, ಲಕ್ಷ್ಯಮಾಡದೆ, ಮಹಾಮುನಿಯು ಪುನಃಪುನಃ ತಪಸ್ಸಿನಲ್ಲೇ ನಿರತನಾಗಿರುವುದನ್ನು ಕಂಡು ಬ್ರಹ್ಮನು ಮತ್ತೊವೆ

ವಿಶ್ವಾಮಿತ್ರನಲ್ಲಿಗೆ ಬಂದು "ಇದುವರೆಗೆ ರಾಜರ್ಷಿಯಾಗಿದ್ದ ನೀನು ಋಷಿಯಾಗು" ಎಂದು ಅನುಗ್ರಹಿಸಿ ಹೊರಟುಹೋದನು.

ತದನಂತರ ವಿಶ್ವಾಮಿತ್ರನು ಪುನಃ ತಪಸ್ಸಿಗೆ ಕುಳಿತನು ಹೀಗಿರಲು ಇಂದ್ರನಿಂದ ಪ್ರೇರಿತಳಾಗಿ ಮೇನಕೆಯು ಸ್ನಾನದ ವ್ಯಾಜದಿಂದ ಇವನ ಸಮೀಪಕ್ಕೆ ಬಂದು ತಪಸ್ಸಿಗೆ ಭಂಗವನ್ನುಂಟು ಮಾಡಿದಳು. ಅವಳ ಅಪೂರ್ವವಾದ ಸೌಂದರ್ಯಾದಿಗಳಿಗೆ ಮನಸೋತು ವಿಶ್ವಾಮಿತ್ರನು ತಪಸ್ಸನ್ನು ಬಿಟ್ಟು ಅವಳೊಡನೆ ವಿಹರಿಸತೊಡಗಿದನು. ಅವಳು ಗರ್ಭವತಿಯಾಗಿ, ಶಕುಂತಳೆಗೆ ಜನ್ಮವಿತ್ತು, ಆ ಶಿಶುವನ್ನು ಅಲ್ಲಿಯೇ ಬಿಟ್ಟು ಸ್ವಸ್ಥಾನಕ್ಕೆ ತೆರಳಿದಳು. ವಿಶ್ವಾಮಿತ್ರನೂ ಆ ಶಿಶುವನ್ನು ತ್ಯಜಿಸಲು ಆದೇ ಶಿಶುವು ಕಣ್ವಮಹರ್ಷಿಗಳ ಪೋಷಣೆಯಲ್ಲಿ ಬೆಳೆದು ಕಾಲಕ್ರಮದಲ್ಲಿ ದುಷ್ಯಂತ ಮಹಾರಾಜನ ಪತ್ನಿಯಾಗಿ, ಮಹಾಮಹಿಮನಾದ ಭರತನಿಗೆ ಜನನಿಯಾಗಿ ಪ್ರಖ್ಯಾತಳಾದಳು. ಈ ಮಹಾಮಹಿಮನಿಂದಲೇ ನಮ್ಮ ದೇಶಕ್ಕೆ ಭಾರತದೇಶವೆಂದು ಹೆಸರು ಬಂದಿತು. ಶಿಶುವಿನ ಜನನಾನಂತರ ಮಹರ್ಷಿಯು ತನ್ನ ಚಿತ್ತಚಾಂಚಲ್ಯಕ್ಕಾಗಿ ಪಶ್ಚಾತ್ತಾಪಪಟ್ಟು, ಆ ಸ್ಥಳವನ್ನು ಬಿಟ್ಟು ಹಿಮವತ್ಪರ್ವತಕ್ಕೆ ತೆರಳಿ ಅಲ್ಲಿ ಘೋರವಾದ ತಪಸ್ಸನ್ನು ಆಚರಿಸ ತೊಡಗಿದನು. ಇವನು ತಪಸ್ಸಿನಿಂದ ಸುಪ್ರೀತನಾದ ಚತುರ್ಮುಖನು ಪ್ರತ್ಯಕ್ಷನಾಗಿ "ಮಹರ್ಷಿತ್ವ" ವನ್ನು ಅನುಗ್ರಹಿಸಿದನು.

ಆದರೂ ವಿಶ್ವಾಮಿತ್ರನಿಗೆ ಸಮಾಧಾನವಾಗಲಿಲ್ಲ. ಆದ್ದರಿಂದ ಬೇಸಿಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ ಛಳಿಗಾಲದಲ್ಲಿ ನೀರಿನ ಮಧ್ಯದಲ್ಲಿಯೂ ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು. ಇದರಿಂದ ದೇವತೆಗಳು ಬಹಳ ತೊಂದರೆಗೊಳಗಾಗಿ ದೇವೇಂದ್ರನಲ್ಲಿ ಮೊರೆಯಿಡಲು ಅವನು ರಂಭಾಸಮೇತನಾಗಿ ಮಹರ್ಷಿಯ ತಪಸ್ಸನ್ನು ಕೆಡಿಸಲು ಅಲ್ಲಿಗೆ ಬಂದನು. ರಂಭೆಯು ಕೌಶಿಕನ ಆಗ್ರಹಕ್ಕೆ ಪಾತ್ರಳಾಗಿ ಶಾಪಗ್ರಸ್ತಳಾದಳು. ಶಚೀಪತಿಯು ಭಯಭೀತನಾಗಿ ಓಡಿ ಹೋದನು. ರಂಭೆಗೆ ಶಾಪವನ್ನು ಕೊಟ್ಟಮೇಲೆ ಮಹಾಮುನಿಗೆ ವ್ಯಾಕುಲವಾಗಿ, ಇಂದ್ರಿಯಗಳು ಇನ್ನೂ ತನಗೆ ಸ್ವಾಧೀನವಾಗಿಲ್ಲವೆಂದು ಭಾವಿಸಿ, ಮೌನಿಯಾಗಿಯೇ ತಪಸ್ಸನ್ನು ಅನುಷ್ಠಿಸಲು ನಿರ್ಧರಿಸಿ ಸ್ಥಳಾಂತರಕ್ಕೆ ಹೊರಟನು.

ಅಲ್ಲಿ ಅನೇಕ ದಿವಸಗಳು ನಿರಾಹಾರನಾಗಿ ಮಹಾ ಘೋರ ತಪಸ್ಸನ್ನು ನೆರವೇರಿಸಿ, ಪಾರಣೆಗಾಗಿ ಸಿದ್ಧನಾಗಿರುವಾಗ ದೇವೇಂದ್ರನು ಛದ್ಮವೇಷದಿಂದ ಬಂದು ಆಹಾರವನ್ನು ಬೇಡಲು, ಸಿದ್ಧಪಡಿಸಿದ್ದ ಭೋಜನವನ್ನು ಅವನಿಗೇ ಬಡಿಸಿ ತೃಪ್ತಿಪಡಿಸಿದನು. ಅನಂತರ ಪುನಃ ಅತಿ ಭೀಷಣವಾದ ತಪಸ್ಸಿಗೆ ಕುಳಿತನು. ಶ್ವಾಸವನ್ನು ಸಹ ನಿರೋಧಿಸಿ ತಪಸ್ಸನ್ನು ಆಚರಿಸುತ್ತಿದ್ದ ಆತನ ಬ್ರಹ್ಮರಂಧ್ರದಿಂದ ಭಯಂಕರವಾದ ಧೂಮಜ್ವಾಲವು ಹೊರಟಿತು. ಅದರ ಜ್ವಾಲೆಯಿಂದ ದೇವತೆಗಳ ಸಂಚಾರಕ್ಕೂ ಅಡ್ಡಿಯಾಗಲು ಭಯಗ್ರಸ್ತರಾದ ದೇವತೆಗಳು ಹಿರಣ್ಯಗರ್ಭನನ್ನು ಸಂದರ್ಶಿಸಿ ತಮ್ಮ ಕಷ್ಟಗಳನ್ನು ನಿವೇದಿಸಿಕೊಂಡರು. ಆಗ ಅವನು ಸುಪ್ರಸನ್ನನಾಗಿ ಮಹರ್ಷಿಯ ಬಳಿಗೆ ಬಂದು "ನಿನ್ನ ತಪಸ್ಸಿನಿಂದ ಲೋಕವೆಲ್ಲಾ ತತ್ತರಿಸುತ್ತಿದೆ. ನೀನು 'ಬ್ರಹ್ಮರ್ಷಿ' ಯಾಗಿರುವೆ. ನಿನ್ನ ತಪಸ್ಸನ್ನು ವಿರಮಿಸು" ಎಂದು ತಿಳಿಸಿದನು. ಆಗ ತೃಪ್ತನಾದ ವಿಶ್ವಾಮಿತ್ರನು ಭಕ್ತಿನಮ್ರನಾಗಿ ಪಿತಾಮಹನಿಗೆ ಪ್ರಣಾಮಮಾಡಿ "ನನಗೆ ವೇದಗಳೆಲ್ಲವೂ ತಾವಾಗಿಯೇ ಬರಲಿ, ಬ್ರಹರ್ಷಿಯಾದ ವಸಿಷ್ಠರು ನನ್ನನ್ನು 'ಬ್ರಹ್ಮರ್ಷಿ' ಯೆಂದು ಸಂಭೋಧಿಸಲಿ" ಎಂದು ಬೇಡಿಕೊಳ್ಳಲು, ಕಮಲಾಸನನು, ಮಹಾತಪಸ್ವಿ ವಸಿಷ್ಠರನ್ನು ಕರೆತಂದು ಅವರ ಅಮೃತವಾಣಿಯಿಂದ "ಬ್ರಹ್ಮರ್ಷಿ" ಯೆಂದು ಕರೆಸಿದನು. ಹೀಗೆ ವಿಶ್ವಾಮಿತ್ರನು "ಬ್ರಹ್ಮರ್ಷಿ" ಯಾಗಿ, ಆದರ್ಶಮಹರ್ಷಿಯೆಂದು ವಿಶ್ವವಿಖ್ಯಾತನಾದನು.

ಮಹಾಮಂತ್ರವೂ ಪರಮಪವಿತ್ರವೂ ಆದ "ಗಾಯತ್ರೀಮಂತ್ರ"ವನ್ನು ಸಾಕ್ಷಾತ್ಕರಿಸಿಕೊಂಡು ವಿಶ್ವಾಮಿತ್ರನೇ ಅದರ ದೇವತೆಯಾದನು. ಪ್ರಪಂಚದ ಜನರೆಲ್ಲಾ ಅದರ ಮಹಿಮೆಯನ್ನೂ ರಹಸ್ಯವನ್ನೂ ಅರಿತು ಕೊಳ್ಳಲು ಮುಖ್ಯ ಕಾರಣನಾದನು. ಇಷ್ಟೇ ಅಲ್ಲದೆ ವಿಶ್ವಾಮಿತ್ರ ಗೋತ್ರ, ಕೌಶಿಕಗೋತ್ರ, ಲೋಹಿತ ಗೋತ್ರ ಅಘಮರ್ಷಣ, ಓದಲ, ಯಾಜ್ಞವಲ್ಕ್ಯ, ಮೊದಲಾದ ಗೋತ್ರಗಳಿಗೆ ಗೋತ್ರ ಪ್ರವರ್ತಕ ಋಷಿಯಾಗಿ ವಿಶ್ವಾಮಿತ್ರನು ನಿರಂತರವೂ ಆ ಗೋತ್ರಾನುಯಾಯಿಗಳಿಗೆ ಆರಾಧ್ಯದೈವವಾಗಿ ವಿಜೃಂಭಿಸುತ್ತಿದ್ದಾನೆ.

ಹರಿಶ್ಚಂದ್ರಮಹಾರಾಜನು "ಸತ್ಯಹರಿಶ್ಚಂದ್ರ" ನೆಂದು ಆಚಂದ್ರಾರ್ಕವಾಗಿ ಪ್ರಪಂಚದಲ್ಲಿ ವಿಖ್ಯಾತವಾಗಲು ಈ ಮಹರ್ಷಿಯೇ ಮೂಲಕಾರಣ. ಮೊದಲು ಹರಿಶ್ಚಂದ್ರನನ್ನು ಬಹಳವಾಗಿ ಕಾಡಿಸಿ ಪೀಡಿಸಿದರೂ, ಅನೇಕ ರೀತಿಯ ಕಠಿಣ ಪರೀಕ್ಷೆಯಲ್ಲಿ ಅವನು ಸಮರ್ಪಕ ರೀತಿಯಲ್ಲಿ ಉತ್ತೀರ್ಣನಾದುದನ್ನು ಕಂಡು, ತನ್ನ ತಪಃ ಶಕ್ತಿಯಲ್ಲಿ ಅರ್ಧಭಾಗವನ್ನು ಅವನಿಗೆ ದಾನಮಾಡಿದನು. ಅವನ ಪುರೋಭಿವೃದ್ಧಿಗಾಗಿಯೇ ಅನೇಕ ತೊಂದರೆಗಳನ್ನು ಅವನಿಗೆ ಕೊಟ್ಟು ಹಿಂಸೆಪಡಿಸಿದನೆಂಬುದು ಇದರಿಂದ ವ್ಯಕ್ತವಾಗುತ್ತದೆ.

# ಸಪ್ತಗಿರಿ

## ಮುಂದಿನ ಸಂಚಿಕೆಯಲ್ಲಿ

**ಜೂನ್ ೧೯೮೨**

ಶ್ರೀಪಾದರಾಜರು
– ಡಾ॥ ಕೆ. ಗೋಕುಲನಾಥ್

ಶಾಸನಗಳಲ್ಲಿ ಶ್ರೀವೆಂಕಟೇಶ
–ಡಾ॥ ಅನಂತರಂಗಾಚಾರ್ಯ

ಸದಾಶಿವೇಂದ್ರ
– ಬ. ನ. ಗುಂಡೂರಾವ್

ಶ್ರೀಪಾದರಾಜರು ಕಂಡ ಶ್ರೀಕೃಷ್ಣ
– ಜಿ. ಶ್ರೀಧರ್

ರಾಮಾಯಣದಲ್ಲಿ ನೃತ್ಯ ಸಂಗೀತ
– ಡಾ॥ ಎಂ. ಸಂಗಮೇಶಂ

ಜೊತೆಗೇ ಗೃಹಲಕ್ಷ್ಮಿ, ಕಿಶೋರಜಗತ್, ಯುವವಾಣಿ ಮೊದಲಾದ ಸ್ಥಿರ ಶೀರ್ಷಿಕೆಗಳೊಡನೆ ಬಿಡುಗಡೆಯಾಗಲಿದೆ.

**ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿ.**

ಬಿಡಿ ಪ್ರತಿ ರೂ ೧–೦೦ ಮಾತ್ರ

# ರೆಕಾರ್ಡಿಂಗ್ ಸ್ಟೇಷನ್ ಆರಂಭ



ತಿರುಪತಿಯ ಸಂಗೀತ ನೃತ್ಯ ಕಲಾಶಾಲೆಯಲ್ಲಿ ನಿರ್ಮಿಸಲಾದ ರೆಕಾರ್ಡಿಂಗ್ ಸ್ಟೇಷನ್ ಅನ್ನು 1982ರ ಮಾರ್ಚ್ 26 ರಂದು ಪ್ರಾರಂಭಿಸಲಾಯಿತು. ತತ್ಸಂದರ್ಭದಲ್ಲಿ ಮಾತನಾಡುತ್ತ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಪಿ. ಎಸ್. ರಾಜಗೋಪಾಲರಾಜು ಅವರು ಸ್ಟೇಷನ್‌ನ ಅಗತ್ಯವನ್ನೂ ಅದರ ಪೂರ್ವ ಯೋಜನೆಯನ್ನೂ ವಿವರಿಸಿದರು. ಮೊದಲನೆಯ ನೆಯ ಬಾರಿಯ ಧ್ವನಿ ಮುದ್ರಣದಲ್ಲಿ ವೇದ ಘೋಷವನ್ನು ದಾಖಲುಗೊಳಿಸಲಾಯಿತು.

ಇದುವರೆಗೆ 5,000 ಗಂಟೆಗಳ ಕಾಲದಷ್ಟು ವೇದ ವಾಚನವನ್ನೂ ರೆಕಾರ್ಡ್ ಮಾಡಲಾಗಿದ್ದು, ಇನ್ನೂ ಮೂರು ಸಾವಿರ ಗಂಟೆಗಳ ರೆಕಾರ್ಡ್ ಮಾಡಬೇಕಾಗಿದೆ.

ಭಾರತದ ಸಂಗೀತ ನೃತ್ಯ ಕಲಾಶಾಲೆಗಳಲ್ಲಿ ಪ್ರಥಮ ಎನ್ನಬಹುದಾದ ಈ ರೆಕಾರ್ಡಿಂಗ್ ಸ್ಟೇಷನ್‌ಗಾಗಿ ಹನ್ನೊಂದು ಲಕ್ಷ ರೂ॥ ಗಳ ವೆಚ್ಚ ತಗುಲಿದೆ ಎಂದು ವರದಿ ಯಾಗಿದೆ.

( 6 ನೇ ಪುಟದಿಂದ )

ಇರುವುದರಿಂದ 'ಜ್ವಾಲಾನರಸಿಂಹ' ನೆಂದು ಹೆಸರಾಯಿತು. ಈ ಭಯಂಕರ ರೂಪವನ್ನು ನೋಡಿದನಂತರ ಶಾಂತಮೂರ್ತಿಯನ್ನು ನೋಡಬೇಕಲ್ಲವೇ ?

## ಪಾವನ ನರಸಿಂಹಗಿರಿ

ಉಗ್ರಗಿರಿಯ ಹಿಂಭಾಗದಿಂದ ಹತ್ತಿ ಹೋಗಬೇಕು. ಅದೂ ಸಹಾ ಅರಣ್ಯದ ಮಧ್ಯದಲ್ಲಿದೆ. ಎಲ್ಲಾ ಅವತಾರಗಳನ್ನು ನೋಡಿದ ಮೇಲೆ ಭಕ್ತವೃಂದದ ಜೀವನವು ಪಾವನವಾಗ ಬೇಕಲ್ಲವೇ? ಅಂತೆಯೇ ಭಗವಂತನೂ ಸಹಾ ಜೀವಕೋಟಿಯನ್ನು ಪಾವನ ಮಾಡಲು ತಾನು ಕೊನೆಯಲ್ಲಿ ಪಾವನ ಮೂರ್ತಿಯಾಗಿ ಶೋಭಾಯಮಾನವಾಗಿ ನಿಂತು ದರ್ಶನವನ್ನು ಕೊಡುತ್ತಿದ್ದಾನೆ. ಧುರುಳ ಹಿರಣ್ಯಕಶಿಪುವನ್ನು ಕೊಂದು, ಪ್ರಹ್ಲಾದನಿಗೆ ಅಭಯವಿತ್ತು ತಾನೂ ಸಹಾ ಶ್ರೀದೇವಿಯೊಡನೆ, ಶಾಂತಮೂರ್ತಿಯಾಗಿ ಉಳಿದ ಜೀವಿಗಳಿಗೆ ಪಾವನರೂಪವನ್ನು ತೋರಿಸಿ, ಸರ್ವರಿಗೂ ಮುಕ್ತಿಮಾರ್ಗವನ್ನು ತೋರಿಸಲು 'ಪಾವನಮೂರ್ತಿ' ಯಾಗಿಯೇ ನಿಂತು ದರ್ಶನವನ್ನು ಕೊಡುತ್ತಲಿದ್ದಾನೆ. ಅವನ ಪಾದಕಮಲನನ್ನು ನಂಬಿ ಭಕ್ತಾದಿಗಳೂ, ಪಾವನಮೂರ್ತಿಯಲ್ಲಿ ಮುಕ್ತಿ ಪಡೆಯಬೇಕೆಂಬುದೇ ಭಕ್ತಕೋಟಿಗಳ ಪ್ರಾರ್ಥನೆ. ಅಲ್ಲಿಗೆ ಹೋಗದ ಭಕ್ತಾದಿಗಳು ಅವನ ಪ್ರೇರಣೆಯಿಂದ ಅಲ್ಲಿಗೆ ದಯಮಾಡಿಸಿ ಅವನ ಅವತಾರಗಳನ್ನು ಸಂದರ್ಶಿಸಿ ಮುಕ್ತಿಯನ್ನು ಪಡೆಯಬೇಕು. ಅಹೋಬಿಲದ ಯಾತ್ರೆಯನ್ನು ಮಾಡಿದವರು ಸದ್ಗತಿ ಹೊಂದುವುದರಲ್ಲಿ ಯಾವ ಸಂದೇಹವೂ ಇಲ್ಲ.

---

(ಹಿಂದಿನ ಪುಟದಿಂದ)

ಶ್ರೀರಾಮಚಂದ್ರ ನಂತಹ ಅವತಾರಪುರುಷನಿಗೆ ಅತಿಶ್ರೇಷ್ಠವಾದ ಅಸ್ತ್ರವಿದ್ಯೆಯನ್ನು "ಬಾಲಾ ಅತಿಬಾಲಾ" ಎಂಬ ಅಮೋಘ ವಿದ್ಯೆಗಳನ್ನು ಕಲಿಸಿ ಕೊಟ್ಟು ಅವನ ಪೂಜ್ಯ ಗುರುವೆಂದು ಪ್ರಖ್ಯಾತನಾದನು. ದಶರಥನ ಆಸ್ಥಾನಕ್ಕೆ ತಾನೇ ಬಂದು ಅವನನ್ನು ಬಲಾತ್ಕರಿಸಿ ರಾಮಲಕ್ಷ್ಮಣರನ್ನು ತನ್ನ ಜೊತೆಯಲ್ಲಿ ಕರೆದು ಕೊಂಡು ಹೋಗಿ ಅವರಿಗೆ ಅತಿಪ್ರಶಸ್ತವಾದ ವಿದ್ಯೆಗಳನ್ನು ಉಪದೇಶಿಸಿ 'ಸೀತಾಕಲ್ಯಾಣ'ವನ್ನು ತಾನೇ ಸ್ವತಃ ನಿಂತು ನೆರವೇರಿಸಿದನಂತರ "ಅಪ್ರಷ್ಟ್ವಾ ತೌ ಚ ರಾಜಾನೌ ಜಗಾಮೋತ್ತರ ಪರ್ವತಂ" ಎಂದು ಶ್ರೀರಾಮಾಯಣದಲ್ಲಿಯೇ ವಿವರಿಸಲ್ಪಟ್ಟಿರುವಂತೆ, ಅಲ್ಲಿಗೆ ಹೋದನು. 'ಶ್ರೀರಾಮಪಟ್ಟಾಭಿಷೇಕ' ಸಂದರ್ಭದಲ್ಲಿಯೂ ಪುನಃ ಬರಲಿಲ್ಲ. ಈ ಸನ್ನಿವೇಶವು ಅತ್ಯಾಕರ್ಷಕವೂ ಆಶ್ಚರ್ಯಜನಕವೂ ಆಗಿದೆ. ತನ್ನ ಕರ್ತವ್ಯವನ್ನು ಸುಸೂತ್ರವಾಗಿ ನಿರ್ವಹಿಸುವುದರಲ್ಲಿ ಈ ಮಹರ್ಷಿ ಅದ್ವಿತೀಯ.

ಮಹಾರಾಜನಾಗಿದ್ದವನು ಆ ಪದವಿಯನ್ನು ತುಚ್ಛೀಕರಿಸಿ ಕ್ರಮ ಕ್ರಮವಾಗಿ ರಾಜರ್ಷಿ, ಋಷಿ, ಮಹರ್ಷಿ, ಬ್ರಹ್ಮರ್ಷಿ ಪದವಿಗಳನ್ನು ಇವನಲ್ಲದೆ ಬೇರಾರೂ ಪಡೆದಿರುವಂತೆ ಕಂಡುಬರುವುದಿಲ್ಲ. "ಶಾಪಾದಪಿ ಶರಾದಪಿ" ಎಂಬಂತೆ ದ್ವಿಮುಖವಾದ ಸಾಮರ್ಥ್ಯ ಇವನೊಬ್ಬನಿಗೇ ಅಸಾಧಾರಣ. ಇಂತಹ ಮಹಾಮಹಿಮನ ಅಸಂಖ್ಯಾತ ಸದ್ಗುಣಗಳನ್ನು ವಿವರಿಸಲು ಸಾಮಾನ್ಯರಾದ ಅಲ್ಪಮತಿಗಳಿಗೆ ಸಾಧ್ಯವೇ ಇಲ್ಲ. ಇಂತಹ ನಿಃಸ್ವಾರ್ಥ ಮಹನೀಯರು ಅನೇಕರು ನಮ್ಮ ಪವಿತ್ರ ಜನ್ಮಭೂಮಿಯಲ್ಲಿ ಜನ್ಮತಾಳಿದ್ದರೂ ಆ ಗೋಷ್ಠಿಯಲ್ಲಿ ವಿಶ್ವಾಮಿತ್ರನು ಅಗ್ರಗಣ್ಯನೆಂಬುದು ಶತಃಸಿದ್ಧ.

ಪರಮಪವಿತ್ರವಾದ ನಮ್ಮ ಭಾರತದೇಶದಲ್ಲಿ ವಿಶ್ವಾಮಿತ್ರನಂತಹ ಲೋಕೋಪಕಾರಿಗಳು ಹಾಗೂ ಜ್ಞಾನಿಗಳು ಪದೇ ಪದೇ ಜನ್ಮತಾಳಿ ಈ ಪುಣ್ಯಭೂಮಿಯ ಜ್ಞಾನಪ್ರದೀಪ ದಿಗ್ದಿಗಂತದಲ್ಲೂ ವ್ಯಾಪಿಸಿ ಅಳಿಯದ ನಂದಾದೀಪದಂತೆ ಪ್ರಜ್ವಲಿಸಲು ತಮ್ಮ ಜ್ಞಾನರೂಪವಾದ ಅಪೂರ್ವತೈಲವನ್ನು ನಿರಂತರವೂ ಸುರಿಸುತ್ತಿರಲಿ.



# ಪೋತನ ಪಂಚಶತಿ ಉತ್ಸವಗಳು



ಋಗ್ವೇದದ ತೆಲುಗು ಅನುವಾದದ ಮೊದಲೆರಡು ಸಂಪುಟಗಳನ್ನು ಬಿಡುಗಡೆ ಮಾಡುತ್ತಿರುವ ಶ್ರೀ ಪಿ. ವಿ. ನರಸಿಂಹರಾವ್, ಚಿತ್ರದಲ್ಲಿ ಶ್ರೀ ಪ್ರಸಾದ್, ಶ್ರೀ ಬೆಜವಾಡ ಗೋಪಾಲರೆಡ್ಡಿ, ಋಗ್ವೇದ ಸಂಪಾದಕ ಶ್ರೀ ವಡ್ಲಮೂಡಿ ಗೋಪಾಲಕೃಷ್ಣಯ್ಯನವರನ್ನು ಕಾಣಬಹುದು.

ಕಾಕತೀಯರ ರಾಜಧಾನಿ ವರಂಗಲ್‌ನಲ್ಲಿ ಆಂಧ್ರಭಾಷಾ ಕವಿ ಪೋತನನ ಐದನೆಯ ಶತಮಾನೋತ್ಸವಗಳು ಆಯ್ದು ದಿನಗಳ ಕಾಲ ತುಂಬು ಜನಪ್ರಿಯವಾಗುವಂತೆ ನಡೆದವು.

ಆಯ್ದು ದಿನಗಳೂ ಬೆಳಗ್ಗೆ ಮಧ್ಯಾಹ್ನ ಸಂಜೆಗಳಲ್ಲಿ ವಿದ್ವದ್ಗೋಷ್ಠಿ ವಿಚಾರ ಸಂಕಿರಣಗಳೂ, ರಾತ್ರಿಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು, ಪುಸ್ತಕಗಳ ಬಿಡುಗಡೆ, ಮೊದಲಾದವುಗಳಿಂದ ವಿಕಾಸ ವಿನೋದ ಪರವಾದ ವಾತಾವರಣ ಸೃಜನೆಯಾಗಿತ್ತು.

ತಿ. ತಿ. ದೇವಸ್ಥಾನಗಳು ತತ್ಸಂದರ್ಭದಲ್ಲಿ ಋಗ್ವೇದದ ಮೊದಲೆರಡು ಸಂಪುಟಗಳನ್ನೂ (ಸಂಪಾದಕ: ಶ್ರೀ ವಡ್ಲಮೂಡಿ ಗೋಪಾಲಕೃಷ್ಣಯ್ಯ) ಪೋತನ ಭಾಗವತ ನೀರಾಜನಮು (ಸಂಪಾದಕರು ಶ್ರೀಕೆ. ಸಂಪತ್ಕುಮಾರಾಚಾರ್ಯ) ಪೋತನ ಭಾಗವತಮು (ವ್ಯಾಖ್ಯಾನಃ ಶ್ರೀ ಜಂದ್ಯಾಲ ಪಾಪಯ್ಯ ಶಾಸ್ತ್ರಿ, ಸಂಪಾದಕ: ಶ್ರೀ ನಂಡೂರಿ ರಾಮಕೃಷ್ಣಮಾಚಾರ್ಯ) ಭಕ್ತ ಪೋತನ (ಮಕ್ಕಳ ಪುಸ್ತಕ)ಗಳನ್ನು ಬಿಡುಗಡೆ ಮಾಡಿತು. ಪುಸ್ತಕಗಳನ್ನು ಬಿಡುಗಡೆ ಮಾಡಿದ ಭಾರತದ ವಿದೇಶಾಂಗ ಮಂತ್ರಿ ಶ್ರೀ ಪಿ. ವಿ. ನರಸಿಂಹರಾವ್ ಅವರು ಪೋತನ ಭಾಗವತದ ಹಿರಿಮೆಯನ್ನು, ತಿ. ತಿ. ದೇ. ಗಳ ಭಾಗವತದ ಪ್ರಚಾರ ಕಾರ್ಯವನ್ನೂ ಕೊಂಡಾಡಿದರು.

ಉಪರಾಷ್ಟ್ರಪತಿ ಶ್ರೀ ಹಿದಾಯತುಲ್ಲಾ ಅವರಿಂದ ಉದ್ಘಾಟಿತವಾದ ಪಂಚ ಶತಿ ಉತ್ಸವಗಳಲ್ಲಿ ಬಹುಜನ ವಿದ್ವಾಂಸರು ತಮ್ಮ ವಿಚಾರಗಳನ್ನು ಮಂಡಿಸಿ ಚರ್ಚೆಯಲ್ಲಿ ಪಾಲುಗೊಂಡರು. ಅವರುಗಳೆಂದರೆ ಸರ್ವಶ್ರೀ ಡಾ॥ ಪಿ. ವಿ. ನರಸಿಂಹರಾವು. (ಭಾಗವತ ಸಂಪ್ರದಾಯ ಭಾರತೀಯ ಐಕ್ಯತೆ) ಆಚಾರ್ಯ ಮಹಾದೇವನ್ (ಭಾಗವತ ತತ್ತ್ವ) ಆಚಾರ್ಯ ರಾಜೇಶ್ವರ ಶರ್ಮ (ಪೋತನನ ಬಹುಮುಖ ವ್ಯಕ್ತಿತ್ವ) ಡಾ॥ ಕೆ. ಕೃಷ್ಣಮೂರ್ತಿ (ಅಲಂಕಾರ ಶಾಸ್ತ್ರ–ಭಾಗವತ ಸಂಪ್ರದಾಯ) ಡಾ॥ ಎ. ಕೃಷ್ಣಮಾಚಾರ್ಯ (ಪೋತನನ ಪ್ರಭಾವ) ವೀರಭದ್ರರಾವ್ (ಸಮಕಾಲೀನ ಸಮಾಜ–ಪೋತನ ಭಾಗವತ) ಪಿ. ಶಿವರಾಮಮೂರ್ತಿ (ಭಾರತೀಯ ಕಲೆ – ಭಾಗವತ) ಡಾ॥ ಪ್ರಸಾದರಾಯ ಕುಲಪತಿ (ಕವಿಪೋತನ) ಡಾ॥ ಟಿ. ದೋಣಪ್ಪ (ತೆಲುಗು ಸಾಹಿತ್ಯ–ಪೋತನ) ಡಾ॥ ಅಪ್ಪಾರಾವ್ (ಕಲೆಗಳು–ಪೋತನ ಪ್ರಭಾವ) ಅಲ್ಲದೇ ಅನೇಕ ಹಿರಿಯರು–ಸರ್ವಶ್ರೀ ಪು. ನಾರಾಯಣಚಾರ್ಯ, ಶೇಷೇಂದ್ರಶರ್ಮ, ಜಿ. ಎನ್. ರೆಡ್ಡಿ, ಬಿ. ಗೋಪಾಲರೆಡ್ಡಿ, ಮೊದಲಾದವರು ಪೋತನನ ಹಿರಿಮೆಯನ್ನು ಕುರಿತಾಡಿದರು.

ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸರ್ವಶ್ರೀ ಡಾ॥ ಎಂ ಬಾಲಮುರಳೀ ಕೃಷ್ಣ, ಎಲ್ಲಾ ವೆಂಕಟೇಶ್ವರರಾವ್ ಶ್ರೀಮತಿ ಸುಲೋಚನಾ ದೇವಿ, ಅನ್ನಮಾಚಾರ್ಯ ಕಲಾವಿದರು ಭಾಗವಹಿಸಿದ್ದರು.

ಉತ್ಸವಗಳನ್ನು ವರಂಗಲ್ಲಿನ ಪೋತನ ಪಂಚಶತಿ ಮಹೋತ್ಸವ ಸಮಿತಿ, ಆಂಧ್ರಪ್ರದೇಶ ಸಂಸ್ಕೃತಿ ಇಲಾಖೆಯ ಪೋತನ ಜಯಂತಿ ಸಮಿತಿ, ತಿ. ತಿ. ದೇ. ಗಳು ಸಂಯುಕ್ತವಾಗಿ ನಡೆಸಿದವು. ಶ್ರೀ ಕೆ. ಶೇಷಗಿರಿರಾವ್ ಅವರ ತೈಲಚಿತ್ರ 'ಪೋತನ' ವನ್ನು ಅಧಿಕೃತ ಚಿತ್ರವೆಂದು ನಿರ್ಧರಿಸಲಾಗಿದ್ದು ಅದನ್ನು ತಿ. ತಿ. ದೇಗಳು ತ್ರಿವರ್ಣ ಚಿತ್ರವನ್ನಾಗಿಸಿ ಬಿಡುಗಡೆ ಮಾಡಿತ್ತು.

ಉತ್ಸವಗಳಲ್ಲಿ ಆಂಧ್ರಪ್ರದೇಶಸಾಹಿತ್ಯ ಅಕ್ಯಾಡಮಿ, ನೃತ್ಯನಾಟಕ ಅಕ್ಯಾಡಮಿ, ತಿ. ತಿ. ದೇ. ಪ್ರಕಟನಶಾಖೆ, ವಿಶ್ವಹಿಂದೂ ಪರಿಷತ್ ಗಳು ಪುಸ್ತಕ ಪ್ರದರ್ಶನ ಮಾರಾಟ ವ್ಯವಸ್ಥೆಯನ್ನುಂಟು ಮಾಡಿದ್ದು ತಿ. ತಿ. ದೇ. ಮಾರಾಟ ಮಳಿಗೆಯಲ್ಲಿ ಮೂವತ್ತು ಸಾವಿರಕ್ಕೂ ಮಿಕ್ಕಿದ ಮೌಲ್ಯದ ಪುಸ್ತಕಗಳ ಮಾರಾಟವಾಯಿತು.

ಭಾಗವತ ಚಿತ್ರ ಪ್ರದರ್ಶನವೂ ತತ್ಸಂದರ್ಭದಲ್ಲಿ ಏರ್ಪಾಡಾಗಿದ್ದು ಅತಿ ಹೆಚ್ಚು ಜನವನ್ನು ಆಕರ್ಶಿಸಿತೆನ್ನಬೇಕು.

ಪೋತನ ಪಂಚಶತಿ ಉತ್ಸವಗಳಲ್ಲಿ ತಿ. ತಿ. ದೇ. ಪ್ರಕಟನ ಶಾಖೆಯ ಪುಸ್ತಕ ಪ್ರದರ್ಶನ ಮಾರಾಟದ ಮಳಿಗೆ. ಚಿತ್ರದಲ್ಲಿ ಎಡದಿಂದ ಎರಡನೆಯವರು ಸಪ್ತಗಿರಿ ಸಂಪಾದಕ ಕೆ. ಸುಬ್ಬಾರಾವ್.





ಮೇಲಿನ ಚಿತ್ರ ; ಸ್ತ್ರೀಯರ ಬಾಲ್‌ಬ್ಯಾಡ್‌ಮಿಂಟನ್ ಟೂರ್ನಿಯ ಉದ್ಘಾಟನಾ ಭಾಷಣ: ಶ್ರೀಮತಿ ಕಮಲಾಮೆನನ್,
ಮಧ್ಯದ ಚಿತ್ರ : ಪುರುಷರ ಬ್ಯಾಸ್ಕೆಟ್‌ಬಾಲ್ ಟೂರ್ನಿಯ ಬಹುಮಾನ ವಿನಿಯೋಗ: ಶ್ರೀಮತಿ ಗೋಪಿಕಾ ಪ್ರಸಾದ್.
ಮೂರನೆಯ ಚಿತ್ರ ; ಏಪ್ರಿಲ್ 1ರಂದು ನಡೆದ ತಿ.ತಿ.ದೇ. ಉದ್ಯೋಗಿಗಳ ನಾಟಕ 'ಮಥನಂಲೋ ಹಾಲಾಹಲಂ' ದೃಶ್ಯ.

## ತಿ. ತಿ. ದೇ ವಾರ್ಷಿಕ ಆಟೋಟ ಸ್ಪರ್ಧೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಉದ್ಯೋಗಿಗಳ 1981–82 ರ ವಾರ್ಷಿಕ ಆಟೋಟ ಸ್ಪರ್ಧೆಗಳು ಕಳೆದ ಫೆಬ್ರವರಿ 8ರಿಂದ ಏಪ್ರಿಲ್ 1ರ ವರೆಗೆ ನಡೆದು ಯಶಸ್ವಿಯಾದವು.

ತಿರುಮಲೆ-ತಿರುಪತಿ ದೇವಸ್ಥಾನಗಳ ಐದು ಸಾವಿರಕ್ಕೂ ಮಿಕ್ಕಿದ ಉದ್ಯೋಗಿಗಳಲ್ಲಿ ದೇಹ ದಾರ್ಢ್ಯತೆ, ದೈಹಿಕ ಮಾನಸಿಕ ಆರೋಗ್ಯಗಳನ್ನು ಹೆಚ್ಚುಗೊಳಿಸುವ ಪ್ರಯತ್ನವಾದ ಈ ಆಟೋಟಗಳಲ್ಲಿ ಹಾಕಿ, ಕಾಲ್ಚೆಂಡು, ಕ್ರಿಕೆಟ್, ಕಬಡ್ಡಿ, ವಾಲಿಬಾಲ್, ಮೊದಲಾದ ಬಯಲಿನ ಆಟಗಳು, ಕೇರಂ, ಚೆಸ್, ಟೇಬಲ್ ಟೆನ್ನಿಸ್, ಮೊದಲಾದ ಒಳಾಂಗಣ ಆಟಗಳೂ ಸ್ತ್ರೀಯರಿಗಾಗಿ, ಬಾಲ್ ಬ್ಯಾಡ್ ಮಿಂಟನ್, ಷಟಲ್ ಬ್ಯಾಡ್ ಮಿಂಟನ್ ಟೇಬಲ್ ಟೆನ್ನಿಸ್, ಮೊದಲಾದ ಆಟಗಳೂ ನಡೆಸಲಾಗಿದ್ದು, ಪುರುಷರ ಹಾಗೂ ಸ್ತ್ರೀಯರ ಪ್ರತ್ಯೇಕ ಓಟ, ನೆಗೆತ ಕೋಲೆಸತ, ಗುಂಡಿನ ಎಸೆತ, ಮೊದಲಾದ ವಯ್ಯಕ್ತಿಕ ಸ್ಪರ್ಧೆಗಳೂ ನಡೆದವು

ಇಡೀ ಕಾರ್ಯಕ್ರಮ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ ಆರ್. ಪ್ರಸಾದರ ಸಲಹೆ ಸೂಚನೆಗಳಿಂದ ತಿ. ತಿ. ದೇ. ಸಂಕ್ಷೇಮಾಧಿಕಾರಿ ಶ್ರೀ ರಾಮಕೃಷ್ಣಯ್ಯ ಅವರ ನಿರ್ದೇಶನದಲ್ಲಿ, ತಿ. ತಿ. ದೇ ಶಿಕ್ಷಣ ಸಂಸ್ಥೆಗಳ ದೈಹಿಕ ಶಿಕ್ಷಣಾಧಿಕಾರಿಗಳಾದ ಸರ್ವಶ್ರೀ ಜಯರಾಮಕೃಷ್ಣನ್, ಪಾಂಡುರಂಗಂ, ಸುಂದರರಾಮ ರೆಡ್ಡಿ, ಚಂದ್ರಬಾಬು ಇವರುಗಳಿಂದ ಸಂಯೋಜಿತಗೊಂಡು ಯಶಸ್ವಿಯಾಯಿತು.

ಹಾಕಿಯಲ್ಲಿ ಶ್ರೀ ಮಾಧವರೆಡ್ಡಿಯವರ ಟೀಂ ಹಾಗೂ ಕ್ರಿಕೆಟ್‌ನಲ್ಲಿ ಶ್ರೀ ವೈ ನಾಗೇಶ್ವರ ರಾಯರ ಟೀಂಗಳೂ, ಟೇಬಲ್ ಟೆನ್ನಿಸ್ ಸಿಂಗಲ್ಸ್ ನಲ್ಲಿ ಸ್ತ್ರೀಯರಲ್ಲಿ ಶ್ರೀಮತಿ ಅಮ್ಮಣ್ಣಮ್ಮ ಅವರೂ ಮೊದಲ ಪ್ರಶಸ್ತಿಗಳನ್ನು ಪಡೆದರು. ಹೆಚ್ಚಿನ ವೈಯಕ್ತಿಕ ಬಹುಮಾನಗಳನ್ನು ಪಡೆದ ಇತರರೆಂದರೆ ಸರ್ವಶ್ರೀ ಡಿ. ಗೋಪಾಲಕೃಷ್ಣ ಮೂರ್ತಿ (ಕೋಲೆಸತ, 100 ಮೀ ಓಟ, ಲಾಂಗ್ ಜಂಪ್ – ಮೂರರಲ್ಲೂ ಪ್ರಥಮ) ಪಿ ಭಾಸ್ಕರ್ (ಗುಂಡೆಸೆತ, ಹೈಜಂಪ್–ಪ್ರಥಮ ಲಾಂಗ್‌ಜಂಪ್–ದ್ವಿತೀಯ) ಕು|| ಪಿ. ಜ್ಯೋತಿ (ಗುಂಡೆಸೆತ, 100 ಮೀ ಓಟ–ತೃತೀಯ)

ವಾರ್ಷಿಕ ಆಟೋಟಗಳ ಸ್ಪರ್ಧೆಗಳ ಜೊತೆಗೇ ವಿವಿಧ ಟೂರ್ನಿಗಳೂ ನಡೆದವು.

ದಿನಾಂಕ 19–20 ಮಾರ್ಚ್ ರಂದು ನಡೆದ ಮಹಿಳೆಯರ ಬಾಲ್ ಬ್ಯಾಡ್ ಮಿಂಟನ್ ಟೂರ್ನಿಯನ್ನು ಪದ್ಮಾವತೀ ಕಾಲೇಜಿನ ಪ್ರಿನ್ಸಿಪಾಲ್ ಶ್ರೀಮತಿ ಕಮಲಾ ಮೆನನ್ ಅವರು ಉದ್ಘಾಟಿಸಿದರು. ಆರು ಟೀಂಗಳು ಭಾಗವಹಿಸಿದ ಈ ಟೂರ್ನಿಯಲ್ಲಿನ ರೋಲಿಂಗ್ ಷೀಲ್ಡ್ ನೆಲ್ಲೂರಿನ ಶೈನಿಂಗ್ ಸ್ಟಾರ್ಸ್ ಟೀಂನವರದ್ದಾಯಿತು. ಷೀಲ್ಡ್ ಅನ್ನು ಆ ಟೀಂನ ಕ್ಯಾಪ್ಟನ್ ಅವರಿಗೆ ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಸುಬ್ಬರಾಯುಲು ಅವರ ಪತ್ನಿ ಶ್ರೀಮತಿ ಮಂಗತಾಯಾರಮ್ಮ ಅವರು ನೀಡಿದರು.

ದಿನಾಂಕ 21 ರಿಂದ 24 ರವರೆಗೆ ನಡೆದ ಪುರುಷರ ಬ್ಯಾಸ್ಕೆಟ್ ಬಾಲ್ ಟೂರ್ನಿಯನ್ನು ಎಸ್. ವಿ. ವಿಶ್ವವಿದ್ಯಾನಿಲಯದ ಶ್ರೀ ಎಂ. ಪಿ. ಶಾಸ್ತ್ರಿಯವರು ಉದ್ಘಾಟಿಸಿದರು. 13 ಟೀಂಗಳು ಭಾಗವಹಿಸಿದ ಈ ಪಂದ್ಯದ ರೋಲಿಂಗ್ ಷೀಲ್ಡ್ ದಕ್ಷಿಣ ಮಧ್ಯ ರೈಲ್ವೆ ಟೀಂನ ಪಾಲಾಯಿತು. ಶ್ರೀಮತಿ ಗೋಪಿಕಾ ಪ್ರಸಾದ್ ಅವರು ರೋಲಿಂಗ್ ಷೀಲ್ಡ್ ಅನ್ನು ಸದರಿ ಟೀಂನ್ ಕ್ಯಾಪ್ಟನ್‌ಗೆ ನೀಡಿದರು.

ವಾರ್ಷಿಕ ಆಟೋಟಗಳ ಸಮಾರೋಪ ದಿನಾಂಕ 1–4–82 ರಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರ ಅಧ್ಯಕ್ಷತೆಯಲ್ಲಿ ನಡೆಯಿತು. ಆಟೋಟ ಸ್ಪರ್ಧಾವಿಜೇತರಿಗೆ ಬಹುಮಾನಗಳನ್ನು ಶ್ರೀಮತಿ ಗೋಪಿಕಾ ಪ್ರಸಾದರು ವಿತರಣೆ ಮಾಡಿದರು. ಸಮಾರಂಭದ ನಂತರ ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ ತಿ. ತಿ. ದೇ. ಉದ್ಯೋಗಿಗಳ ಸಂಘದ ವತಿಯಿಂದ "ಮಥನಂಲೋ ಹಾಲಹಲಂ" ತೆಲುಗು ನಾಟಕ ನಡೆಯಿತು.

---

Edited and Published on behalf of the T. T. Devastanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸಂತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5. | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75–00 |
| ಟಿ.ಬಿ.ಸಿ ಒಳಗಿ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

**ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.**

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.